

ನಾರಾಯಣ ನಿನ್ನ ನಾಮದ ಸ್ಮರಣೆಯ
ಸಾರಾಮೃತವೆನ್ನ ಬಾಯಿಗೆ ಬರಲಿ ॥ ಪ ॥

ಆಡುವಾಗ ನಲಿದಾಡುವಾಗಲಿ
ನೋಡುತ ನಿಂದು ಮಾತನಾಡುವಾಗಲಿ
ಕೇಡುತನದಿಂದಲಿ ಕೂಡಿ ಭವದೊಳು
ಮಾಡಿದ ಪಾಪವು ಓಡಿ ಹೋಗುವ ಹಾಗೆ ॥ ೧ ॥

ಉರಿ ಬಂದಾಗಲಿ ಚಳಿ ಬಂದಾಗಲಿ
ಗಡ ಗಡ ನಡುಗುತಿರುವಾಗಲಿ
ಹರಿ ನಾರಾಯಣ ದುರಿತ ನಿವಾರಣ
ಹಗಲು ಇರಳು ನಿನ್ನ ನೆನೆಸುವ ಹಾಗೆ ॥ ೨ ॥

ಕಷ್ಟವಾಗಲಿ ಉತ್ಕೃಷ್ಟವಾಗಿರಲಿ
ಇಷ್ಟಾರ್ಥಗಳೆಲ್ಲ ಕೂಡಿರಲಿ
ಕೃಷ್ಣ ಕೃಷ್ಣ ಎಂಬಭೀಷ್ಟ ನಾಮದ
ಅಷ್ಟಾಕ್ಷರೀ ಮಂತ್ರ ಜಪಿಸುವ ಹಾಗೆ ॥ ೩ ॥

ಕನಸಿನೊಳಾಗಲಿ ಮನಸಿನೊಳಾಗಲಿ
ಮನಸು ಕೆಟ್ಟಿರಲೀ ಮುನಿದಿರಲೀ
ಜನಕಜಾಪತಿ ನಿನ್ನ ನಾಮದ ಸ್ಮರಣೆಯು
ಮನಸಿನೊಳಗೆ ಸದಾ ನೆಲಸುವ ಹಾಗೆ ॥ ೪ ॥

ಸಂತತ ನಿನ್ನ ಸಾಸಿರನಾಮವೆನ್ನ
ಅಂತರಂಗದೊಳಗಿರುತಿರಲಿ
ಸಂತತ ವರದ ಶ್ರೀ ಪುರಂದರವಿಠಲ
ಅಂತ್ಯ ಕಾಲದೊಳು ನಿನ್ನ ನೆನೆಸುವ ಹಾಗೆ ॥ ೫ ॥

—ಪುರಂದರದಾಸರು



# ಓದುಗರ ಓಲೆ

ಮಾನ್ಯರೆ;

ಸಪ್ತಗಿರಿಯ ಫೆಬ್ರವರಿ ಸಂಚಿಕೆಯಲ್ಲಿ ಶ್ರೀ ಶಂಕರಾಚಾರ್ಯರ ಕೃತಿಯು ಹಸ್ತಪ್ರತಿಯೊಂದಿಗೆ ಪ್ರಕಟವಾಗಿದೆ. ಆ ಕೃತಿಯಲ್ಲಿ ಭಾರ್ಗವನ ಹೆಸರಿದೆ, ಮತ್ತೆ ಬುದ್ಧ ಕಲ್ಕಿಯರ ಹೆಸರಿದೆ. ರಾಮಕೃಷ್ಣರ ಹೆಸರಿಲ್ಲ. ಈ ಸ್ಖಾಲಿತ್ಯದ ಬಗೆಯೇಕಾಯಿತು? ರಾಮ-ಕೃಷ್ಣಾವತಾರದ ಸಂಬಂಧ ವೆಂಕಟಗಿರಿ ಮಹಾತ್ಮ್ಯೆಯಲ್ಲಿದೆ! ಅದು ಅವಶ್ಯವಾಗಿದೆ!

ವಿದ್ವಾನ್. ಕೆ. ವೆಂಕಟರಾಮಾಚಾರ್ಯ
ಸುರತ್ಕಲ್ಲು.

ಮಾನ್ಯರೆ;

ಇದೇ ಫೆಬ್ರವರಿ ತಿಂಗಳಿನ ಸಪ್ತಗಿರಿ ಸಂಚಿಕೆಯಲ್ಲಿ ಪ್ರಕಟವಾಗಿರುವ ಶ್ರೀ ತಟ್ಟಿ ವೆಂಕೋಬರಾಯರ 'ಪೂರ್ಣಪ್ರಜ್ಞ ಪ್ರಶಸ್ತಿ' ಎಂಬ ಲೇಖನ ಮೆಚ್ಚುವಂತಿದೆ. ಶ್ರೀಯುತರು ಇದರ ಜೊತೆಗೆ ಶ್ರೀ ಶ್ರೀಪಾದರಾಯರು ರಚಿಸಿರುವ "ಶ್ರೀ ಮಧ್ವನಾಮ"ದ ಕೆಲವು ನುಡಿಗಳನ್ನಾದರೂ ಉದಾಹರಿಸಿದ್ದರೆ ಈ ಲೇಖನ ಇನ್ನೂ ಅಮೂಲ್ಯವಾಗುತ್ತಿತ್ತು ಎಂದು ನನ್ನ ಅಭಿಪ್ರಾಯ.

ಇದೇ ಸಂಚಿಕೆಯಲ್ಲಿ ಪ್ರಕಟವಾಗಿರುವ 'ಶ್ರೀ ವೆಂಕಟೇಶ ಭುಜಂಗ ಪ್ರಯಾತಸ್ತೋತ್ರ' ಎಂಬ ಕೃತಿ ಚಿಕ್ಕದಾಗಿದ್ದರೂ ಕುತೂಹಲಕಾರಿಯಾಗಿದೆ. ಇದುವರೆಗೆ ಅಲಭ್ಯವಾಗಿದ್ದ ಈ ಸ್ತೋತ್ರವನ್ನು ಬೆಳಕಿಗೆ ತಂದ ಶ್ರೀ ಕೆಳದಿ ಗುಂಡಾಜೋಯಿಸ್ ಮತ್ತು ಶ್ರೀ ಗುರುಪಾದ ಹೆಗಡೆ ಅವರಿಗೂ ಇದನ್ನು ಪ್ರಕಟಿಸಿದ ತಮಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳು. ಈ ಬಗ್ಗೆ ವಿದ್ವಾಂಸರು ಇನ್ನೂ ಹೆಚ್ಚಿನ ವಿಚಾರವನ್ನು ಬೆಳಕಿಗೆ ತರಬೇಕಾಗಿ ವಿನಂತಿ.

ಕಡೆಯದಾಗಿ ಒಂದು ಸಲಹೆ. ಸಪ್ತಗಿರಿ ಬೇರೆ ಬೇರೆ ಭಾಷೆಗಳಲ್ಲಿ ಪ್ರಕಟವಾಗುವುದಷ್ಟೆ. ಆಯಾ ಸಂಚಿಕೆಯ ಲೇಖನಗಳ ಪಟ್ಟಿಯನ್ನಾದರೂ ಎಲ್ಲ ಭಾಷೆಗಳ ಪತ್ರಿಕೆಗಳಲ್ಲಿ ಕೊಟ್ಟರೆ ಈ ಬಗ್ಗೆ ತುಂಬ ಅನುಕೂಲವಾಗುತ್ತದೆ. ಕೇವಲ ಚಿಕ್ಕ ಅಕ್ಷರಗಳಲ್ಲಿ ಮುದ್ರಿಸಿದರೂ ಆಗಬಹುದು.

ಮಾರ್ಚಿ ತಿಂಗಳಿನಿಂದ ಸಪ್ತಗಿರಿ ಸಕಾಲದಲ್ಲಿ ಪ್ರಕಟವಾಗುವುದೆಂದು ಭರವಸೆ ನೀಡಿರುವ ನಿಮಗೆ ನನ್ನ ವಂದನೆಗಳು.

ಡಾ|| ಜಿ. ವರದರಾಜರಾವ್
ಮೈಸೂರು.

ಮಾನ್ಯರೆ;

ಫೆಬ್ರವರಿ ಸಂಚಿಕೆಯತ್ತ ಗಮನ ಸೆಳೆಯ ಬಯಸುತ್ತೇನೆ. ಅಲ್ಲಿ ಪ್ರಕಟವಾಗಿರುವ 'ಚಕ್ರತೀರ್ಥ ಹನುಮಂತ', 'ಶ್ರೀ ಚಂದ್ರಶೇಖರ ಮೇಶ್ವರಿ', 'ಶಿವ ಪ್ರತಿಮಾವಿಚಾರ'ಗಳು ತತ್ಸಂಬಂಧಿ ಚಿತ್ರಗಳನ್ನೂ ಒಳಗೊಂಡಿದ್ದರೆ ಇಡೀ ಪುಸ್ತಕದ ಮೌಲ್ಯ ಹಾಗೂ ಅಂದಗಳು ಹೆಚ್ಚುತ್ತಿದ್ದವು.

ಎಚ್. ಕೆ. ಸಿದ್ದಣ್ಣ.
ತುಮಕೂರು.




ಗೌರವ ಸಂಪಾದಕರು:

ಎಸ್. ಲಕ್ಷ್ಮೀನಾರಾಯಣ ಐ.ಎ.ಎಸ್.,

ಸಂಪಾದಕ:

ಕೆ. ಸುಬ್ಬಾರಾವು, ಎಂ.ಎ.,

ಉಪಸಂಪಾದಕ:

ಪಿ. ಎಸ್. ಶ್ರೀನಿವಾಸನ್ ಎಂ.ಎ.,

ಮುದ್ರಣ:

ಎಂ. ವಿಜಯಕುಮಾರ್‌ರೆಡ್ಡಿ

ಲೇಖನ/ಜಾಹೀರಾತುಗಳಿಗೆ

ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ

ಪ್ರತಿಗಳಿಗೆ;
ವೆಲ್‌ಫೇರ್ ಆಫೀಸರ್
ಸೇಲ್ಸ್‌ವಿಂಗ್
ತಿರುಮಲೆ ತಿರುಪತಿ ದೇವಸ್ಥಾನ
ತಿರುಪತಿ.

**ಬಿಡಿ ಪ್ರತಿ ೧-೦೦**

**ವಾರ್ಷಿಕ ಚಂದಾ ೧೨-೦೦**





ಸಂಪುಟ ೧೫]    ಏಪ್ರಿಲ್ ೧೯೮೫    [ಸಂಚಿಕೆ ೧೧


# ವಿಷಯಸೂಚಿ



ಮುಖ ಚಿತ್ರ: ಶ್ರೀ ರಾಮಾನುಜಾಚಾರ್ಯರು    ಚಿತ್ರ: ಕೆ. ಜಗದೀಶ್

ಹಿಂಬದಿಯಲ್ಲಿ: ನಾಗಲಾಪುರಂ ಬ್ರಹ್ಮೋತ್ಸವದ ಒಂದು ಚಿತ್ರ.

ಒಳಗಡೆ: 1 ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವದ ಹಂಸವಾಹನ ಚಿತ್ರ.

2 ಶ್ರೀ ವೆಂಕಟೇಶ್ವರ ಬಾಲಮಂದಿರದ ವಾರ್ಷಿಕೋತ್ಸವದ ಚಿತ್ರಗಳು.




ಸನಾತನ ಧರ್ಮಕ್ಕೆ ಸಾಹಿತ್ಯವೇ ಮೊದಲ ಸಾಕ್ಷಿ. ಅದೂ ಮಾತಿನಲ್ಲಿ ಹರಿದು ಮುಂದೆಂದೋ ಬರಹಕ್ಕೇರಿದಂತಹ ವೇದಗಳ ಆಧಾರ. ಎಂತಲೇ ಇದರ ಪ್ರಾಚೀನತೆಯ ಮೂಲದ ಇತಿಹಾಸವನ್ನು ಗುರುತಿಸ ಹೊರಡುವ ಸಂಶೋಧಕರಿಗೆ ಕಾಲಕ್ರಮಗತಿಯೊಂದು ನುಂಗಲಾಗದ ತುತ್ತು. ಆದರೂ ವೇದವ್ಯಾಸ ವಾಲ್ಮೀಕಿ ಮೊದಲಾದವರಿಂದ ಒಂದೊಂದು ಕಾಲಘಟ್ಟಗಳನ್ನು ಗುರುತಿಸುವಂತೆ ಸಾಧ್ಯವಾಗಿದೆ.

ಮೊದಲಿಗೆ ವೇದಗಳನ್ನು ವಿಂಗಡಿಸಿದ ಕೀರ್ತಿಗೆ ಭಾಜನರಾದ ವ್ಯಾಸರು ಮಹಾಭಾರತದ ಇತಿಹಾಸವನ್ನೂ ನಂತರ ಬ್ರಹ್ಮಸೂತ್ರಗಳನ್ನೂ ನೀಡಿ ಸನಾತನಧರ್ಮದ ಹಳಮೆಗೆ ಹಿರಿಮೆಗೆ ಒಂದು ಖಚಿತರೂಪವನ್ನು ಕೊಟ್ಟರೂ, ಅವರ ನಂತರ ಅವೂ ಮುಂದಿನವರಿಗೆ, ಬೆಳೆಯುವ ಬದುಕಿನ ಅಗತ್ಯಗಳಿಗೆ ತಕ್ಕಂತೆ ಪರಿವರ್ತಿತವಾಗುತ್ತಿದ್ದ ನಾಗರಿಕತೆಯಲ್ಲಿ ಬೆಳೆಯುತ್ತಿದ್ದವರಿಗೆ, ತುಸು ಕಷ್ಟ ಕೊಟ್ಟಿರಬೇಕು ಅರಿವಿನ ನೆಲೆಯಲ್ಲಿ. ಹರಿ ಪಾರಮ್ಯವನ್ನು ವಿವರಿಸಿದ ತಮಿಳಿನ ಆಳ್ವಾರರ ಪಾಶುರಗಳೂ ಕಾಲಾನುಕ್ರಮದಲ್ಲಿ ಪುನಃ ಪ್ರಕಾಶನದ ಅಗತ್ಯ ಹೊಂದಿದವೆಂಬುದು ಇಲ್ಲಿ ಗಮನಾರ್ಹ. ಇಂತಲ್ಲಿ ಅನೇಕ ಸಂಪ್ರದಾಯಗಳು ಮೊಳೆತು, ವೈಚಾರಿಕ ತರ್ಕದಿಂದಲೇ ಮೋಕ್ಷ ಪಡೆಯಬಹುದೆಂಬ, ವಾದಗಳೂ ಬೆಳೆಯತೊಡಗಿದ್ದವು. ಬಾದರಾಯಣರು ಬರೆದ ಪ್ರಸ್ಥಾನ ತ್ರಯಗಳಲ್ಲಿ ಹಾಗೂ ಇತರ ಪುರಾಣೇತಿಹಾಸಗಳಲ್ಲಿ ನಡುವೆ ಹಾಸು ಹೊಕ್ಕಾಗಿರುವ ಒಂದು ಏಕಸೂತ್ರತೆಯನ್ನು ಎತ್ತಿ ತೋರುವ ಭಾಷ್ಯಕಾರರ ಅಗತ್ಯ ಅರಿವಾಗ ತೊಡಗಿದಾಗ, 'ತ್ರಿಮತಾಚಾರ್ಯರೆಂದು ಪ್ರಸಿದ್ಧರಾದ ಶಂಕರ ರಾಮಾನುಜ ಮಧ್ವರ ಅವತಾರವಾಗಿ ಎಲ್ಲವೂ ಒಂದು ದಿಕ್ಕಿನಲ್ಲಿ ಒಂದು ಗತಿಯಲ್ಲಿ ವಿವರಿತವಾದುವು. ( ಅದ್ವೈತ ವಿಶಿಷ್ಟಾದ್ವೈತ ದ್ವೈತಗಳ ನಡುವೆ ಕಾಲ ವ್ಯತ್ಯಾಸಗಳಿವೆಯಾದರೂ ಸನಾತನ ಧರ್ಮದ ಕಾಲಪ್ರವಾಹದಲ್ಲಿ ಈ ವ್ಯತ್ಯಾಸ ನಗಣ್ಯ ).

ಶ್ರೀರಾಮಾನುಜಾಚಾರ್ಯರದು ಒಂದು ರೀತಿಯಲ್ಲಿ ವಿಶಿಷ್ಟವಾದ ಸೇವೆಯೆನ್ನಬಹುದು. ಅವರದು ಸಂಸ್ಕೃತದ ಸಾಮಾನ್ಯಜನದೂರ ಪಾಂಡಿತ್ಯಮಾತ್ರವೇ ಅಲ್ಲ; ತಮಿಳಿನ ಮಣ್ಣಿನ ವಾಸನೆಯ ಕೃಷಿಯೂ ಹೌದು. ವಸ್ತುಸ್ಥಿತಿಯಲ್ಲಿ ಎರಡೂ ಭಾಷೆಯ ಸಾಹಿತ್ಯವೂ–ಆ ಮೂಲಕ ಎಲ್ಲ ಭಾಷೆಯ ಸಾಹಿತ್ಯವೂ–ಒಂದೇ ಪರಮಸತ್ಯವನ್ನು ಹೇಳುತ್ತವೆ ಎಂಬುದನ್ನು ಅವರು ಉಭಯವೇದಾಂತಗಳಲ್ಲಿ ಆಚಾರ್ಯರಾಗಿ ಸಾಧಿಸಿ ತೋರಿಸಿದರು. ತಮ್ಮ ಒಂಬತ್ತು ಗ್ರಂಥಗಳ ಮೂಲಕ ತಮಗಿಂತ ಹಿಂದಿನ ವೇದಾಂತ ರಹಸ್ಯಾರ್ಥಗಳನ್ನು ಪ್ರಕಟಗೊಳಿಸಿದ್ದೇ ಅಲ್ಲದೆ ಸರ್ವಮಾನವ ಸಮಾನತೆಯನ್ನೂ, ಹರಿ ಪಾರಮ್ಯವನ್ನೂ ಸುಲಭಗ್ರಾಹ್ಯವಾಗುವಂತೆ ಮಾಡಿದರು. ಭಕ್ತಿ ಶರಣಾಗತಿಗಳ ಮೂಲಕ ಧರ್ಮವನ್ನು ಅನುಷ್ಠಾನಮಾಡಿ ಮೋಕ್ಷವನ್ನು ಹೊಂದಬಹುದೆಂಬುದನ್ನು ಪುನರುದ್ಧರಿಸಿದರು. ಈ ಹಾದಿಯಲ್ಲಿ ಸಮಾಜ ಸುಧಾರಣೆಯೂ ಆಯಿತು ಎನ್ನಬೇಕು.

ಈ ತಾತ್ತ್ವಿಕ ನಿಲುವುಗಳೊಂದಿಗೆ ಶರಣಾಗತಿಯನ್ನು ಕೈಗೆಟುಕುವ ಕುಸುಮವಾಗಿಸಲೆಂಬಂತೆಯೋ ಎನ್ನುವಂತೆ ಭಗವಂತನ ಅರ್ಚಾವತಾರ ವೈಭವವನ್ನು ವಿವರಿಸಿ ತಿರುಮಲೆ, ಶ್ರೀರಂಗ ಮುಂತಾದ ದಿವ್ಯದೇಶಗಳಲ್ಲಿ ಭಗವಂತ ಭಕ್ತರ ಸೇವೆ ಸ್ವೀಕರಿಸಲೆಂದೇ ಭುವಿಗಿಳಿದು ನಿಂತಿದ್ದಾನೆ ಎಂದು ವಿವರಿಸಿ, ಆಯಾ ದೇವರುಗಳ ಪೂಜಾಪದ್ಧತಿಗಳನ್ನು ವ್ಯವಸ್ಥಿತಗೊಳಿಸಿದರು. ಎಂತಲೇ ಇಲ್ಲೆಲ್ಲ ಭಗವಂತನಿಗೆ ಭಕ್ತರು ತಮ್ಮ ಕೃತಜ್ಞತೆಯನ್ನು ಅರ್ಪಿಸುವ ಸಮಯದಲ್ಲಿ ರಾಮಾನುಜರಿಗೂ ನಮಿಸುವುದು ಸಮಂಜಸವಾಗಿದೆ.

ಯೋ ನಿತ್ಯಮಚ್ಯುತ ಪಾದಾಂಬುಜ ಯುಗ್ಮರುಕ್ಮ
ವ್ಯಾಮೋಹತಸ್ತದಿತರಾಣಿ ತೃಣಾಯಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ ದಯೈಕ ಸಿಂಧೋ
ರಾಮಾನುಜಸ್ಯ ಚರಣೌ ಶರಣಂ ಪ್ರಪದ್ಯೇ ॥

# ಶ್ರೀ ರಾಮಾನುಜಾಚಾರ್ಯ

ಚೈತ್ರಾದ್ರಾರ್ಸಂಭವಂ ವಿಷ್ಣೋಃ
ದರ್ಶನ ಸ್ಥಾಪನೋತ್ಸುಕಂ ।
ತುಂಡೀರ ಮಂಡಲೇ ಶೇಷ
ಮೂರ್ತಿಂ ರಾಮಾನುಜಂ ಭಜೇ ॥ ॥ ೧ ॥

ಯೋ ನಿತ್ಯಮಚ್ಯುತ ಪದಾಂಬುಜ
ಯುಗ್ಮರುಕ್ಮ
ವ್ಯಾಮೋಹತ ಸ್ತದಿತರಾಣಿ
ತೃಣಾಯ ಮೇನೇ ।
ಅಸ್ಮದ್ಗುರೋರ್ಭಗವತೋಽಸ್ಯ
ದಯೈಕ ಸಿಂಧೋ
ರಾಮಾನುಜಸ್ಯ ಚರಣೌ
ಶರಣಂ ಪ್ರಪದ್ಯೇ ॥ ॥ ೨ ॥

ಆಳ್ವಾರುಗಳ ಗೋಷ್ಠಿಯಲ್ಲಿ ಪ್ರಪನ್ನ ಜನ ಕೂಟಸ್ಥ ಎಂದು ಪ್ರಸಿದ್ಧರಾದ ನಮ್ಮಾಳ್ವಾರರಂತೆ, ಆಚಾರ್ಯರುಗಳ ಗೋಷ್ಠಿಯಲ್ಲಿ ಭಗವಾನ್ ಎನಿಸಿದ ರಾಮಾನುಜರು ಅಸಮಾನರಾಗಿ ಅಮೋಘವಾದ ಸ್ಥಾನವನ್ನು ಗಳಿಸಿದ್ದಾರೆ. ತಮ್ಮ ಪೂರ್ವಾಚಾರ್ಯ ಪರಂಪರಾಪ್ರಾಪ್ತವಾದ ಅರ್ಥ ವಿಶೇಷಗಳನ್ನು ಸರಿಯಾಗಿ ಗ್ರಹಿಸಿ, ಅವೆಲ್ಲವನ್ನೂ ಯಥಾವತ್ತಾಗಿ ಅರ್ವಾಚೀನ ಆಚಾರ್ಯ ಪರಂಪರೆಗೆ ಉಪದೇಶಿಸಿ ಉಪಕರಿಸಿದ್ದಾರೆ.

ಶ್ರೀಮನ್ನಾರಾಯಣನೇ ವ್ಯಾಸರಾಗಿ ಅವತರಿಸಿ ಸಂಸ್ಕೃತ ಭಾಷೆಯಲ್ಲಿ ಶಾರೀರಕ ಮೀಮಾಂಸೆಯೆಂಬ ಬ್ರಹ್ಮಸೂತ್ರಗಳನ್ನು ರಚಿಸಿದರು ; ಅವರೇ ಆಮೇಲೆ ನಮ್ಮಾಳ್ವಾರರಾಗಿ ಬಂದು ಬ್ರಹ್ಮಸೂತ್ರವನ್ನು ತಮಿಳು ಭಾಷೆಯಲ್ಲಿ ಸುಂದರವಾದ ಸೂಕ್ತಿಗಳಿಂದ ವಿವರಿಸಿದರು ; ಕೊನೆಗೆ ಅವರೇ ರಾಮಾನುಜರಾಗಿಯೂ ಅವತರಿಸಿ ಸಂಸ್ಕೃತ – ತಮಿಳು ಎರಡೂ ಸುವಿಶದವಾಗಿ ಪ್ರಕಾಶವಾಗುವಂತೆ ಮಾಡಿ ಈ ಲೋಕದ ಜನತೆಯನ್ನು ಉದ್ಧರಿಸಿದರು.

ವಿಷ್ಣುರೂಪವಾದ ವೇದವ್ಯಾಸರಿಂದ ಸೂತ್ರರೂಪದಲ್ಲಿ ಉಕ್ತವಾಗಿ, ಬೋಧಾಯನ, ಟಂಕ, ದ್ರಮಿಡ, ಗುಹದೇವ, ನಾಥಮುನಿ, ಯಾಮುನ ಮುಂತಾದ ಆಚಾರ್ಯರುಗಳಿಂದ ಸಂಗ್ರಹವಾಗಿ ವಿವೃತವಾದುದನ್ನು, ರಾಮಾನುಜರು ಸಂಗ್ರಹಿಸಿ, ಸಂಸ್ಕರಿಸಿ, ಸ್ಥಿರೀಕರಿಸಿ, ತಾರ್ಕಿಕವಾಗಿ ಸುವ್ಯವಸ್ಥಿತ ರೂಪದಲ್ಲಿ ಪ್ರತಿಪಾದಿಸಿ ಪ್ರಚಾರ ಮಾಡಿದರು.

ಉಪನಿಷತ್ತುಗಳು, ವೇದಾಂತ ಅಥವಾ ಬ್ರಹ್ಮಸೂತ್ರಗಳು, ಭಗವದ್ಗೀತೆ, ಪಾಂಚರಾತ್ರ ಮತ್ತು ವೈಖಾನಸ ಆಗಮ, ಆಳ್ವಾರುಗಳ ಪ್ರಬಂಧ, ಪರಾಶರರ ವಿಷ್ಣುಪುರಾಣ – ಇವು ರಾಮಾನುಜ ದರ್ಶನದ ಆಧಾರಗಳು.

ವಿಷ್ಣುಭಕ್ತಿಯು ಭಗವದ್ಗೀತೆಯಲ್ಲಿ ಆರಂಭವಾಗಿ, ಆಳ್ವಾರುಗಳ ದಿವ್ಯ ಪ್ರಬಂಧದಲ್ಲಿ ಪ್ರವಹಿಸಿ, ರಾಮಾನುಜ ಸಿದ್ಧಾಂತದಲ್ಲಿ ಸ್ಥಿರವಾದ ಉಚ್ಚ ಸ್ಥಾನವನ್ನು ಪಡೆಯಿತು. ಪ್ರವಾಹಗಳೆಲ್ಲವೂ ಜಲಾಶಯದಲ್ಲಿ ಬಂದು ಐಕ್ಯವಾಗುವಂತೆ, ವೇದಗಳಲ್ಲಿನ ವಿಷ್ಣು – ನಾರಾಯಣರ ಪೂಜೆ, ಭಾಗವತ ಸಂಪ್ರದಾಯ, ರಾಮಕೃಷ್ಣರ ಅವತಾರದ ಕಥೆಗಳು, ವೈಷ್ಣವ ಆಗಮ, ಆಳ್ವಾರುಗಳು, ವಿಶಿಷ್ಟಾದ್ವೈತ ವೇದಾಂತ – ಇವುಗಳಲ್ಲಿ ಕಾಣಬರುವ ಮೊದಲಿನ ಭಕ್ತಿಗಳೆಲ್ಲವೂ ತ್ಯಾಗಜೀವಿಯಾದ ರಾಮಾನುಜರಲ್ಲಿ ಬಂದು ಸೇರಿ, ಅಲ್ಲಿಂದ ಮತ್ತೆ ಬೇರೆ ಬೇರೆ ಕಾಲುವೆಗಳಾಗಿ ಒಡೆದು, ಹರಿದು ಭಕ್ತರನ್ನು ಉದ್ಧರಿಸಿವೆ.

## ಶ್ರೀ ಹೆಚ್. ಜಿ. ರಾಮಯ್ಯಂಗಾರ್

ರಾಮಾನುಜರ ಸಗುಣೇಶ್ವರ ಭಾವನೆಯು ಹಾಗೂ ಚಿದಚಿದೀಶ್ವರ ಸಂಬಂಧ ಸಿದ್ಧಾಂತವು, ಭಾವಪ್ರಧಾನ ಜೀವಿಗಳಾದ ಭಾರತೀಯರಿಗೆ ಹಾಗೂ ಭಾರತದ ಭಕ್ತಿಪಂಥಕ್ಕೆ ಸ್ಫೂರ್ತಿಯನ್ನು ನೀಡಿ, ಇಲ್ಲಿನ ಕೋಟ್ಯಾಂತರ ಜೀವಿಗಳ ಮನಸ್ಸನ್ನು ತಣಿಸಿತು. ಭಾರತೀಯ ಸಂತಶ್ರೇಷ್ಠರೆಲ್ಲ ರಾಮಾನುಜ ಪಂಥದಿಂದ ಪ್ರಭಾವಿತರಾದವರೇ.

ಕಾಂಚೀಪುರದ ಬಳಿಯಲ್ಲಿ ಇರುವ ಭೂತಪುರಿ ಅಥವಾ ಶ್ರೀ ಪೆರುಂಬೂದೂರ್‌ನಲ್ಲಿ, ಆಸೂರಿ ಕೇಶವ ಸೋಮಯಾಜಿಗಳ ಮಗನಾದ ಕೇಶವ ಪೆರುಮಾಳ್ ಮತ್ತು ಶ್ರೀಶೈಲಪೂರ್ಣರ ಸೋದರಿ ಕಾಂತಿಮತಿ ಎಂಬೀ ವೈಷ್ಣವ ದಂಪತಿಗಳ ಮಗನಾಗಿ, ರಾಮಾನುಜರು ಜನಿಸಿದರು. ಕೇಶವ ಪೆರುಮಾಳರು ದೊಡ್ಡ ವಿದ್ವಾಂಸರಾಗಿದ್ದು, ಯಜುರ್ವೇದದ ಶಿಕ್ಷಾ, ಶ್ರೌತಗಳ ವಿಷಯವಾಗಿ ಅನೇಕ ಪುಸ್ತಕಗಳನ್ನು ಬರೆದಿದ್ದು, ಅವು ಕೇಶವೀಯ ಎಂಬ ಹೆಸರಿನಿಂದ ಪ್ರಖ್ಯಾತವಾಗಿವೆ.

ಹುಟ್ಟಿದ ಕೂಡಲೇ ಲಕ್ಷ್ಮಣ ಅಥವಾ ರಾಮಾನುಜ ಎಂಬ ಹೆಸರನ್ನು ಇಟ್ಟ ಅವರ ಸೋದರಮಾವ ಶ್ರೀಶೈಲಪೂರ್ಣರು, ಇವರು ಶ್ರೀ ವೈಷ್ಣವ ಮತೋದ್ಧಾರಕರಾದ ಪ್ರವಾದಿ ಎಂದು ಅಭಿಪ್ರಾಯಪಟ್ಟರು.

ರಾಮಾನುಜರ ಬಾಲ್ಯ ವಿದ್ಯಾಭ್ಯಾಸವು ತಂದೆಯ ಬಳಿಯಲ್ಲಿಯೇ ನಡೆಯಿತು. ಜಟಿಲ ಸಮಸ್ಯೆ, ಕಠಿಣ ರೀತಿಯ ಅರ್ಥಗರ್ಭಿತ ವಿಷಯಗಳನ್ನು ತಕ್ಷಣ ಚೆನ್ನಾಗಿ ಗ್ರಹಿಸಿ, ಅದನ್ನು ಎಲ್ಲರಿಗೂ ತಿಳಿಯುವಂತೆ ವಿವರಿಸುವ ಅದ್ಭುತ ಶಕ್ತಿ ಇವರಿಗೆ ಬಾಲ್ಯದಿಂದಲೂ ಇದ್ದಿತು. ಸತ್ಸಂಗ ಹಾಗೂ ಸತ್ಕಥಾಕಾಲಕ್ಷೇಪಗಳಲ್ಲಿ ಸದಾ ಇರಲು ರಾಮಾನುಜರ ಮನಸ್ಸು ಇಷ್ಟಪಡುತ್ತಿದ್ದಿತು. ಸಂತರು, ದೈವಭಕ್ತರು ಎಂದರೆ ಬಾಲಕ ರಾಮಾನುಜರಿಗೆ ಅತಿಯಾದ ಗೌರವ ಆದರಗಳಿದ್ದುವು. ಅಸಾಧಾರಣ ಬುದ್ಧಿಶಕ್ತಿ, ಸನ್ಮಾರ್ಗ ಪ್ರವೃತ್ತಿ, ಸದ್ವರ್ತನೆ, ವಿನಯ, ಶೀಲ ಇವೆಲ್ಲ ಇದ್ದ ರಾಮಾನುಜರು, ಮುಂದೆ ಉತ್ತಮ ದರ್ಶನ ಸ್ಥಾಪನಾಚಾರ್ಯರಾಗುವರು ಎಂಬುದನ್ನು ಸೂಚಿಸುತ್ತಿತ್ತು.

ಕಂಚಿಯಿಂದ ತನ್ನ ಹುಟ್ಟೂರಾದ ಪೂನಾಮಲ್ಲಿಗೆ ಶ್ರೀಪೆರುಂಬೂರ್ ಮೂಲಕ ಹೋಗುತ್ತಿದ್ದ ಕಾಂಚೀಪೂರ್ಣರನ್ನು ಆಗಾಗ ನೋಡುತ್ತಿದ್ದ ರಾಮಾನುಜರಿಗೆ ಅವರ ವಿಷಯದಲ್ಲಿಯೂ, ಕಾಂಚೀಪೂರ್ಣರಿಗೆ ರಾಮಾನುಜರ ವಿಷಯದಲ್ಲಿಯೂ, ಗಾಢವಾದ ಪ್ರೀತಿ ವಿಶ್ವಾಸ ಬೆಳೆಯಿತು. ರಾಮಾನುಜರ ಮನೆಯಲ್ಲಿ ಪರಸ್ಪರ



ಭೇಟಿಯಾಗಿ ಭಗವದ್ವಿಷಯವನ್ನು ಕುರಿತು ಚರ್ಚೆ, ಚಿಂತನೆ ಮಾಡುತ್ತಿದ್ದರು.

ರಾಮಾನುಜರಿಗೆ ಅವರ ಹದಿನಾರನೆಯ ವಯಸ್ಸಿನಲ್ಲಿ ಸಚ್ಛೀಲ ಪ್ರಸೂತೆ, ಗುಣವತಿ, ಅತಿ ಸುಂದರಿ, ಆದ ತಂಜಮಾಂಬಾಳ್ ಎಂಬ ವಧುವಿನೊಡನೆ ವಿವಾಹವಾಯಿತು. ಅತ್ತೆ ಕಾಂತಿಮತಿಗೆ ಸೊಸೆಯು ತುಂಬಾ ಮೆಚ್ಚುಗೆಯಾಗಿದ್ದಳು. ಆದರೆ ಕೆಲವೇ ದಿನಗಳಲ್ಲಿ ತಂದೆಯು ಮರಣ ಹೊಂದಿದುದರಿಂದ, ತಾಯಿ ಹಾಗೂ ಪತ್ನಿಯೊಡನೆ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ವಿದ್ವಾಂಸರ ತವರೂರಾದ ಕಂಚಿಗೆ ಹೋದರು. ಅಲ್ಲಿ ಚಿಕ್ಕಮ್ಮನ ಮಗ ಗೋವಿಂದಭಟ್ಟನೊಡನೆ, ಕಾಂಚೀಪುರದ ಬಳಿಯ ತಿರುಪ್ಪುಟ್ಕುಳಿ ಎಂಬಲ್ಲಿದ್ದ ಪ್ರಸಿದ್ಧ ಅದ್ವೈತಿ ವಿದ್ವಾಂಸರಾದ ಯಾದವಪ್ರಕಾಶರಲ್ಲಿ, ಉನ್ನತ ವಿದ್ಯಾಭ್ಯಾಸವನ್ನು ಮಾಡತೊಡಗಿದರು. ಬಹು ಬೇಗ ರಾಮಾನುಜರು ಗುರುಗಳ ವಿಶ್ವಾಸ, ಆದರಗಳಿಗೆ ಪಾತ್ರರಾಗಿ ಅವರ ಮುಖ್ಯ ಶಿಷ್ಯರಲ್ಲಿ ಒಬ್ಬರಾದರು.

ಶಾಸ್ತ್ರಾಭ್ಯಾಸಂಗದಲ್ಲಿ ಬಹುಬೇಗ ಉನ್ನತಿ ಪಡೆಯುತ್ತಿದ್ದ ರಾಮಾನುಜರನ್ನು ನೋಡುವ ಸಲುವಾಗಿ ಯಾಮುನರು ಶ್ರೀರಂಗದಿಂದ ಕಂಚಿಗೆ ಬಂದು, ಅವರನ್ನು ಅಲ್ಲಿನ ದೇವರಾಜಸ್ವಾಮಿಯ ಸನ್ನಿಧಿಯಲ್ಲಿ ನೋಡಿದರು.

ತಮ್ಮ ಮನಸ್ಸಿನಲ್ಲಿ ಅವ್ಯಕ್ತವಾಗಿ ಅಡಗಿದ್ದ, ಹೊರಬರಲು ತವಕಿಸುತ್ತಿದ್ದ, ಆದರೆ ಮಾತುಗಳಲ್ಲಿ ಸರಿಯಾಗಿ ಮೂಡದಿದ್ದ, ಭಾವನೆಗಳೆಲ್ಲಾ ಸ್ಪಷ್ಟವಾದ ರೂಪುಪಡೆದು ರಾಮಾನುಜರಲ್ಲಿ ಪ್ರಕಾಶಿಸುತ್ತಿವೆಯೆಂಬುದು ಯಾಮುನರಿಗೆ ತಿಳಿಯಿತು. ಭಕ್ತಿ, ಪ್ರಪತ್ತಿ ಪ್ರಧಾನವಾದ ಭಾಗವತ ಸಂಪ್ರದಾಯಕ್ಕೆ, ವೇದಶಾಸ್ತ್ರಗಳ ಅಡಿಪಾಯ ಹಾಕಿ ಶ್ರೀ ವೈಷ್ಣವ ಸಿದ್ಧಾಂತವನ್ನು ನಿರೂಪಿಸುವ ಶಕ್ತಿ, ರಾಮಾನುಜರಲ್ಲಿ ಅಡಗಿದೆಯೆಂದೂ ಯಾಮುನರಿಗೆ ಸ್ಪಷ್ಟವಾಗಿ ಗೋಚರಿಸಿತು. ಅದರಿಂದ ರಾಮಾನುಜರನ್ನು ಆಶೀರ್ವದಿಸಿ, ಅವರನ್ನು ತಮ್ಮ ಮಠಕ್ಕೆ ಕೊಡುವಂತೆ ಕಂಚಿಯ ವರದರಾಜಸ್ವಾಮಿಯನ್ನು ಪ್ರಾರ್ಥಿಸಿ ಶ್ರೀರಂಗಕ್ಕೆ ಹಿಂದಿರುಗಿದರು.

ತೈತ್ತಿರೀಯೋಪನಿಷತ್ತಿನ 'ಸತ್ಯಂ ಜ್ಞಾನಂ ಅನಂತಂ ಬ್ರಹ್ಮ', ಛಾಂದೋಗ್ಯೋಪನಿಷತ್ತಿನ 'ಸರ್ವಂ ಖಲ್ವಿದಂ ಬ್ರಹ್ಮ', ಹಾಗೂ 'ತಸ್ಯ ಯಥಾ ಕಪ್ಯಾಸಂ ಪುಂಡರೀಕಂ ಏವಂ ಅಕ್ಷಿಣೀ', ಬೃಹದಾರಣ್ಯಕೋಪನಿಷತ್ತಿನ 'ಮನಸೈವೇದಮಾಪ್ತವ್ಯಂ ನೇಹನಾನಾಸ್ತಿ ಕಿಂಚನ'– ಮುಂತಾದುವುಗಳ ಶಾಸ್ತ್ರಾರ್ಥದಲ್ಲಿ, ಗುರುಶಿಷ್ಯರಿಗೆ ಭಿನ್ನಾಭಿಪ್ರಾಯ ಬಂದಿತು. ಯಾದವಪ್ರಕಾಶರ ಅಭಿಪ್ರಾಯ, ಉಪದೇಶಗಳೆರಡೂ ಸಮರ್ಪಕವಾಗಿ ತೋರಲಿಲ್ಲವಾದರೂ, ವಿನಯಶೀಲರಾದ ರಾಮಾನುಜರು ತಮ್ಮ ವಿರೋಧಾಭಿಪ್ರಾಯವನ್ನು ಹಾಗೂ ಅತೃಪ್ತಿಯನ್ನು ಮೊದಮೊದಲು ತೋರ್ಪಡಿಸಲಿಲ್ಲವಾದರೂ, ಕೊನೆಗೆ ವ್ಯಕ್ತಪಡಿಸಲೇಬೇಕಾಯಿತು. ಇದರ ಪರಿಣಾಮವಾಗಿ ಗುರುಶಿಷ್ಯರಲ್ಲಿ ವಿಶ್ವಾಸ ಹೋಗಿ, ಯಾದವಪ್ರಕಾಶರನ್ನು ತ್ಯಜಿಸಿ ಬೇರೆ ಗುರುವಿನ ಅನ್ವೇಷಣೆಯಲ್ಲಿ ತೊಡಗಿದರು. ಜೊತೆಗೆ ಗುರುವನ್ನು ವಿರೋಧಿಸಿದುದು ಸರಿಯೇ ತಪ್ಪೇ ಎಂಬ ಬಗ್ಗೆ ಚಿಂತೆ ಉಂಟಾಗಿ, ರಾಮಾನುಜರ ಮನಸ್ಸಿನಲ್ಲಿ ಉಲ್ಲೋಲಕಲ್ಲೋಲ ಉಂಟಾಯಿತು. ಆಗ ತಾಯಿಯ ಸಲಹೆಯಂತೆ ಕಾಂಚೀಪೂರ್ಣರನ್ನು ಭೇಟಿಯಾಗಿ, ಅವರ ಸಲಹೆಯಂತೆ ವರದರಾಜಸ್ವಾಮಿಯ ಅಭಿಷೇಕಕ್ಕಾಗಿ ಶಾಲಕ್ಕಿಣರ್ ಅಥವಾ ಸಾಲವೃಕ್ಷದ ಬಾವಿಯಿಂದ, ಒಂದು ಕೊಡ ತೀರ್ಥವನ್ನು ದಿನವೂ ತಂದೊಪ್ಪಿಸುವ ಕೈಂಕರ್ಯದಲ್ಲಿ ನಿರತರಾದರು. ಜೊತೆಗೆ ಅಧ್ಯಯನ, ಚಿಂತನ, ಮಂಥನ ಮಾಡುತ್ತಿದ್ದರು.

ಯಾದವಪ್ರಕಾಶರಿಂದ ರಾಮಾನುಜರು ಬೇರ್ಪಟ್ಟು, ತಮ್ಮ ಶಿಷ್ಯ ಹಾಗೂ ಉತ್ತರಾಧಿಕಾರಿಯಾಗಬೇಕೆಂದು ಆಸೆಪಡುತ್ತಿದ್ದ ಯಾಮುನರಿಗೆ, ಈ ವಿಷಯ ತಿಳಿದಾಗ ಉಂಟಾದ ಸಂತೋಷದಲ್ಲಿ, ಅವರು ಶ್ರೀರಂಗದ ರಂಗನಾಥನನ್ನು ಕುರಿತು ಹಾಡಿದ ಪದ್ಯಗಳೇ ಶ್ರೀ ವೈಷ್ಣವ ಮತದ ಮೂಲತತ್ತ್ವದ ಪ್ರಕಾಶಿಕೆ ಎನಿಸಿದ ಸ್ತೋತ್ರರತ್ನ.

ತಮ್ಮ ಮನಸ್ಸಿನಲ್ಲಿ ಕಾಡುತ್ತಿದ್ದ ಸಂಶಯ, ಪ್ರಶ್ನೆಗಳಿಗೆ, ಉತ್ತರವನ್ನು ದೇವರಿಂದ ಪಡೆದು ತಿಳಿಸುವಂತೆ, ರಾಮಾನುಜರು ಕಾಂಚೀಪೂರ್ಣರನ್ನು ಕೇಳಿಕೊಂಡರು. ಪರಮಾತ್ಮನು ಕಾಂಚೀಪೂರ್ಣರ ಮೂಲಕ ನೀಡಿದ ಉತ್ತರ ಹೀಗಿದೆ. "ಶ್ರೀಮನ್ನಾರಾಯಣನೇ ಪರತತ್ತ್ವ ಹಾಗೂ ಸೃಷ್ಟಿ ಸ್ಥಿತಿ ಲಯ ಕರ್ತ; ಜೀವ–ಈಶ್ವರ ಭೇದವು ಸಹಜವಾದುದು; ಜೀವವು ಈಶ್ವರನನ್ನು ಅವಲಂಬಿಸಿದೆ; ಮುಕ್ತಿಗೆ ಪ್ರಪತ್ತಿ ಅಥವಾ ಶರಣಾಗತಿಯೇ ಉಪಾಯವು; ಸಾಯುವಾಗ ನನ್ನ ಸ್ಮರಣೆ ಬಲಾತ್ಕಾರವಿಲ್ಲ; ಮರಣದ ನಂತರ ದೇಹದಿಂದ ಬಿಡುಗಡೆಯಾದಾಗ ಮುಕ್ತಿ ಸಿಗುತ್ತದೆ; ಅತಿ ಶ್ರೇಷ್ಠರಾದ ಮಹಾಪೂರ್ಣರನ್ನು ಆಚಾರ್ಯರನ್ನಾಗಿ ಸ್ವೀಕರಿಸಬೇಕು"– ಎಂಬುದೆಲ್ಲವೂ ತಿಳಿದು, ಆ ಮೂಲಕ ತಮ್ಮ ಸಂದೇಹಗಳಿಗೆಲ್ಲ ಸೂಕ್ತ ಸಮಾಧಾನವು ದೊರಕಿದ ರಾಮಾನುಜರಿಗೆ ಮುಂದಿನ ದಾರಿಯು ಸುಸ್ಪಷ್ಟವಾಯಿತು.

ರಾಮಾನುಜರು ತಮ್ಮ ಶಿಷ್ಯನಾಗಬೇಕೆಂದು ಯಾಮುನರು ಇಚ್ಛಿಸಿದಂತೆಯೇ, ಯಾಮುನರ

(35ನೇ ಪುಟ ನೋಡಿ)

# ವಿಷ್ಣು ಸಹಸ್ರನಾಮ

ಶ್ರೀ ವಿಷ್ಣು ಸಹಸ್ರನಾಮ ಸ್ತೋತ್ರವು ಅನಾದಿಯಾಗಿ ಭಾರತೀಯರಿಗೆ ಪರಮ ಪವಿತ್ರವಾದ ಮಹಾಮಂತ್ರವಾಗಿ ಅಂಗೀಕೃತವಾಗಿದೆ, ಇದು ಮಹರ್ಷಿಗಳಿಂದ ಅನುಗ್ರಹೀತವಾದುದು, ಇದು ಜಪ, ಪಾರಾಯಣ, ಹೋಮ, ಅರ್ಚನಾದಿಗಳಲ್ಲಿ ಇಷ್ಟಾರ್ಥಪ್ರಾಪ್ತಿಗೂ ಅನಿಷ್ಟಾರ್ಥಪರಿಹಾರಕ್ಕೂ ಸಾಧಕವೆಂದು ಪರಿಗಣಿತವಾಗಿದೆ. ಆದುದರಿಂದ ಸಂಪ್ರದಾಯಸ್ಥರಾಗ ವೈದಿಕರೆಲ್ಲರಿಗೂ ಪರಮಪೂಜ್ಯ ಸ್ಥಾನದಲ್ಲಿದ್ದು ನಿತ್ಯ ಕರ್ಮಗಳಲ್ಲೊಂದಾಗಿ ಭಾವಿಸಲ್ಪಟ್ಟಿದೆ. ಹಬ್ಬಹರಿದಿನಗಳಲ್ಲಿಯೂ ವಿಶೇಷ ಸಂದರ್ಭಗಳಲ್ಲಿಯೂ ಇದನ್ನು ಪಾರಾಯಣರೂಪದಲ್ಲಿಯೂ ನಾಮಾರ್ಚನಾರೂಪದಲ್ಲಿಯೂ ಪೂಜಾಸಂದರ್ಭಗಳಲ್ಲಿ ಅನುಸಂಧಾನಮಾಡುತ್ತಾರೆ.

ಆರಾಧ್ಯದೇವತೆಯ ಅಸಂಖ್ಯೇಯವಾದ ನಿತ್ಯನಿರತಿಶಯ ನಿರವದ್ಯಕಲ್ಯಾಣಗುಣಗಳನ್ನು ಅನುಸಂಧಾನಮಾಡಿ ಅವನ ಸೌಂದರ್ಯಾತಿಶಯದಲ್ಲಿ ತಲ್ಲೀನನಾಗಿ ಅವನ ಪರಮ ಕೃಪೆಯನ್ನು ಪಡೆಯುವುದೇ ಸಹಸ್ರನಾಮ ಪಾರಾಯಣದ ಪರಮಧ್ಯೇಯ. ಅದು ಒಂದು ವಿಶಿಷ್ಟಕ್ರಮದಲ್ಲಿ ಛಂದೋಬದ್ಧವಾಗಿ ಜೋಡಿಸಲ್ಪಟ್ಟಿರುತ್ತದೆ. ಮಂತ್ರರೂಪದಲ್ಲಿದ್ದರೂ ಅನುಭಾವ್ಯವಾಗಿರುತ್ತದೆ. ಗಾನಯೋಗ್ಯವಾಗಿರುತ್ತದೆ. ವಿಶಿಷ್ಟರೀತಿಯ ಗ್ರಥನದಿಂದ ಕೂಡಿರುತ್ತದೆ. ಲೋಕಕಲ್ಯಾಣಕ್ಕಾಗಿ ಮಹರ್ಷಿಗಳಿಂದ ಅನುಗ್ರಹೀತವಾದ ಇದನ್ನು ಬಿಡಿಬಿಡಿಯಾಗಿ ನಾಮರೂಪದಲ್ಲಿಯೂ ಅರ್ಚನೆ ಮಾಡಬಹುದು. ಅಲ್ಲಿಯೂ ಒಂದೊಂದು ನಾಮವೂ ಪ್ರತ್ಯೇಕ ಶಕ್ತಿ ಮತ್ತು ಸೌಂದರ್ಯಗಳಿಂದ ಕೂಡಿರುತ್ತವೆ

ಸಹಸ್ರನಾಮಗಳು ಮಂತ್ರರೂಪದಲ್ಲಿರುವುದರಿಂದ ಅವುಗಳಿಗೆ ಪ್ರತ್ಯೇಕವಾದ ಋಷಿ, ಛಂದಸ್ಸು, ದೇವತೆಗಳುಂಟು, ಮೊತ್ತಮೊದಲು ತನ್ನ ತಪಶ್ಶಕ್ತಿಯಿಂದ ಮಂತ್ರದ ಸ್ವರೂಪವನ್ನು ಕಂಡುಕೊಂಡು ಲೋಕಕಲ್ಯಾಣಕ್ಕಾಗಿ ಅನುಗ್ರಹಿಸಿದವನು ಋಷಿ, ಕ್ರಮಬದ್ಧವಾದ ಯೋಜನೆಯಿಂದ ಕೂಡಿದ ಅಕ್ಷರ ಪರಿಮಾಣಕ್ಕೆ ಛಂದಸ್ಸೆಂದು ಹೆಸರು. ಮಂತ್ರವು ಯಾರನ್ನು ಕುರಿತುದೋ ಮತ್ತು ಯಾರಿಂದ ಫಲಪ್ರಾಪ್ತಿ ನಿರೀಕ್ಷಿಸಲಾಗುತ್ತದೆಯೋ ಆ ದಿವ್ಯಶಕ್ತಿಯೇ ದೇವತೆ. ಋಷಿ, ಛಂದಸ್ಸು, ದೇವತೆ–ಇವುಗಳ ಅನುಸಂಧಾನಮಾಡದಿದ್ದರೆ ಉದ್ದಿಷ್ಟ ಫಲಸಿದ್ಧಿಯಾಗುವುದಿಲ್ಲವೆಂಬುದು ಆರ್ಷೇಯರ ಮತ.

ಸಹಸ್ರನಾಮಗಳು ದೇವತೆಯ ಸ್ವರೂಪ ರೂಪ, ಗುಣ, ವಿಭವೈಶ್ವರ್ಯ ಗುಣಾದಿಗಳನ್ನು ಸ್ಪಷ್ಟಪಡಿಸುವುದರಿಂದ ಅವನ್ನು ಸ್ತೋತ್ರಗಳೆಂದು ಕರೆಯುವುದೂ ರೂಢಿಯಲ್ಲಿದೆ.

ಇತಿಹಾಸ ಪುರಾಣಗಳಲ್ಲಿ ಅನೇಕ ಸಹಸ್ರನಾಮಗಳು ಉಕ್ತವಾಗಿವೆ. ಯಾವ ದೇವತೆಯನ್ನು ಕುರಿತುದೋ ಅದು ಆ ನಾಮಾಂಕಿತವಾಗಿರುತ್ತದೆ. ಆದುದರಿಂದಲೇ ವಿಷ್ಣುಸಹಸ್ರನಾಮ, ರಾಮಸಹಸ್ರನಾಮ, ನೃಸಿಂಹಸಹಸ್ರನಾಮ, ಲಕ್ಷ್ಮೀಸಹಸ್ರನಾಮ, ಗಣೇಶಸಹಸ್ರನಾಮ–ಮುಂತಾದ ವಿವಿಧ ಸಹಸ್ರನಾಮಗಳಿರುತ್ತವೆ. ಒಂದೇ ದೇವತೆಯನ್ನು ಕುರಿತು ಅನೇಕ ಸಹಸ್ರನಾಮಗಳಿರುವುದೂ ಉಂಟು. ವಿಷ್ಣುಸಹಸ್ರನಾಮವು 'ಪದ್ಮಪುರಾಣ'ದ ೭೨ ನೆಯ ಅಧ್ಯಾಯದಲ್ಲಿ ಬರುತ್ತದೆ. ಶಿವಸಹಸ್ರನಾಮವು ಮಹಾಭಾರತದಲ್ಲಿಯೂ 'ಶಿವಪುರಾಣ'ದಲ್ಲಿಯೂ ಬರುತ್ತದೆ. ಎಲ್ಲ ಸಹಸ್ರನಾಮಗಳೂ ಉದ್ದಿಷ್ಟ ದೇವತೆಯ ಅನುಗ್ರಹದಿಂದ ಪ್ರಾರ್ಥಿತ ಫಲವನ್ನು ಕೊಡತಕ್ಕವಾಗಿವೆ.

ಇತರ ಎಲ್ಲ ಸಹಸ್ರನಾಮಗಳಿಗಿಂತ ಮಹಾಭಾರತದ ಅನುಶಾಸನಿಕ ಪರ್ವದಲ್ಲಿ ಬರುವ ಭೀಷ್ಮರು ಯುಧಿಷ್ಠಿರನಿಗೆ ಉಪದೇಶಿಸಿದ ವಿಷ್ಣುಸಹಸ್ರನಾಮವೇ ಸರ್ವಾದರಣೀಯವಾಗಿದೆ. ಪಂಚಮವೇದವೆಂದು ಪ್ರಖ್ಯಾತವಾಗಿರುವ ಭಾರತಾಂತರ್ಗತವಾದ ಇದು ಅದೇ ಭಾರತಾಂತರ್ಗತವಾದ ಭಗವದ್ಗೀತೆಗೆ ಸಮಾನವಾದುದು. ಇದು ಮೋಕ್ಷಶಾಸ್ತ್ರವಾಗಿರುವುದಲ್ಲದೆ ವಿವಿಧ ರೋಗಪರಿಹಾರಕವೂ ಆಗಿರುತ್ತದೆಯೆಂದು ಆಯುರ್ವೇದಾಚಾರ್ಯರಿಂದ ಉಕ್ತವಾಗಿದೆ. ವೇದದಷ್ಟೇ ಪವಿತ್ರವಾಗಿದ್ದರೂ ಇದು ಕೆಲವರಿಗೆ ಮಾತ್ರ ಮೀಸಲಾಗಿರದೆ ಸಾರ್ವತ್ರಿಕವಾಗಿ, ಜಪ, ಪಾರಾಯಣ, ಅರ್ಚನೆಗಳಿಗೆ ಸಾಧ್ಯವಾಗಿರುತ್ತದೆ. ಇದು ಸ್ತೋತ್ರವಾಗಿರುವುದರಿಂದ ಅನುಭಾವ್ಯವಾಗಿರುತ್ತದೆ, ಇದಕ್ಕೆ ವೇದವ್ಯಾಸರೇ ಋಷಿ, ಇದರ ಛಂದಸ್ಸು ಅನುಷ್ಟುಪ್, ಶ್ರೀಮನ್ನಾರಾಯಣನೇ ದೇವತೆ. ಇವುಗಳ ಅನುಸಂಧಾನಮಾಡಿ ಉದ್ದಿಷ್ಟ ದೇವ

ಡಾ|| ಎನ್. ಅನಂತರಂಗಾಚಾರ್



ತೆಯನ್ನು ಧ್ಯಾನಮಾಡಿ ಅಂಗನ್ಯಾಸ ಕರನ್ಯಾಸಗಳಿಂದ ಕೂಡಿ ಪಾರಾಯಣ ಮಾಡಬೇಕು. ಇದಕ್ಕೆ ೧೫ ಕ್ಕಿಂತ ಹೆಚ್ಚು ಭಾಷ್ಯಗಳಿವೆ.

ದ್ವೈತ, ಅದ್ವೈತ, ವಿಶಿಷ್ಟಾದ್ವೈತ ದರ್ಶನಗಳ ಆಚಾರ್ಯರೂ ಇದಕ್ಕೆ ತಮ್ಮ ಕಾಣಿಕೆಗಳನ್ನು ಭಾಷ್ಯಗಳರೂಪದಲ್ಲಿ ಅರ್ಪಿಸಿದ್ದಾರೆ.

ವಿಷ್ಣುಸಹಸ್ರನಾಮಕ್ಕೆ ಶ್ರೀ ಶಂಕರ ಭಗವತ್ಪಾದರು ರಚಿಸಿರುವ ಭಾಷ್ಯವೇ ಮೊದಲನೆಯದು. ಇದು ಬಹುಜನಪ್ರಿಯವಾಗಿದೆ. ಶ್ರೀ ಶಂಕರರ ಇತರ ಭಾಷ್ಯಗಳಂತೆಯೇ ಬಹು ಸರಳವೂ ಗಂಭೀರವೂ ಆಗಿದೆ. ಇಲ್ಲಿ ಶ್ರೀ ಶಂಕರರ ಜ್ಞಾನ ಭಕ್ತಿ ಸಂಪೂರ್ಣವಾದ ಶುದ್ಧ ಹೃದಯವನ್ನು ಕಾಣಬಹುದು. ಅದ್ವೈತ ದರ್ಶನದಲ್ಲಿ ಅದಕ್ಕೆ ಅವಿರೋಧವಾದ ಭಕ್ತಿ ದರ್ಶನವನ್ನು ಕಾಣಬಹುದು. ಇದು ಆದಿಶಂಕರಾಚಾರ್ಯರ ಕೃತಿಯಲ್ಲವೆಂದು ಕೆಲವರು ಅಭಿಪ್ರಾಯಪಟ್ಟಿದ್ದಾರೆ. ವಿಚಾರ್ಯಮಾರ್ಗೇನ ಇದಕ್ಕೆ ಪೋಷಣೆಯಿರುವುದಿಲ್ಲ. ಈ ಶಂಕರಭಾಷ್ಯಕ್ಕೆ ತಾರಕಬ್ರಹ್ಮಾನಂದ ಸರಸ್ವತಿಯವರ 'ವಿವೃತಿ'ಯೂ ಕವಿ ಪಂಡಿತ ಗಂಭೀರ ಭಾರತಿಯ 'ವಿವರಣ'ವೂ ಶ್ರೀ ರಾಮಾಶಾಸ್ತ್ರಿಗಳ 'ಶಾಂಕರ ಭಾಷ್ಯಾರ್ಥ ಸಂಗ್ರಹ' ಮತ್ತು 'ನಾಮ ನಿರ್ವಚನ'ವೂ ಇವೆ. ಶಂಕರ ಪಂಥೀಯರಲ್ಲಿ ವಿಷ್ಣುಸಹಸ್ರನಾಮಕ್ಕೆ ಉತ್ತಮಸ್ಥಾನವಿದೆ.

ವಿಶಿಷ್ಟಾದ್ವೈತ ಸಂಪ್ರದಾಯದವರು ವಿಷ್ಣುಸಹಸ್ರನಾಮಕ್ಕೆ ಪರಮೋತ್ತಮ ಸ್ಥಾನವನ್ನಿತ್ತಿದ್ದಾರೆ. ಶ್ರೀರಾಮಾನುಜರ ಆದೇಶದಂತೆ ಅವರ ಪಟ್ಟಶಿಷ್ಯರಾದ ಹಾರೀತ ಕುಲತಿಲಕ ಶ್ರೀರಂಗನಾಥ ಪರಾಶರಭಟ್ಟರು 'ವಿಷ್ಣುಸಹಸ್ರನಾಮ'ಕ್ಕೆ 'ಭಗವದ್ಗುಣದರ್ಪಣ' ಎಂಬ ಭಾಷ್ಯವನ್ನು ಅನುಗ್ರಹಿಸಿದ್ದಾರೆ. ಇದರ ಶೀರ್ಷಿಕೆಯೇ ತಿಳಿಸುವಂತೆ ಸಹಸ್ರನಾಮದಲ್ಲಿ ಪ್ರತಿಯೊಂದು ನಾಮಧೇಯವೂ ಭಗವಂತನ ಕಲ್ಯಾಣಗುಣಕ್ಕೆ ವಾಚಕವಾದುದೆಂದು ಉಕ್ತವಾಗಿದೆ. ಅವು ಅವನ ಅರ್ಚಾಮೂರ್ತಿಗಳಿಗೆ ಅನ್ವಯಿಸುವಂತೆ ವ್ಯಾಖ್ಯಾನಿಸಲಾಗಿದೆ. ಗ್ರಂಥವು ಶ್ರುತಿ, ಸ್ಮೃತಿ, ಪುರಾಣ ವಾಕ್ಯಗಳ ಪ್ರಮಾಣ ವಾಕ್ಯಗಳಿಂದ ಹೇರಳವಾಗಿ ಪುಷ್ಟೀಕೃತವಾಗಿದೆ. ಗ್ರಂಥವು ಭಗವದ್ಗುಣ ದರ್ಪಣವಾಗಿರುವಂತೆಯೇ ಆಳವಾದ ವೈದುಷ್ಯಕ್ಕೂ ದರ್ಪಣವಾಗಿದೆ. ಈ ಭಾಷ್ಯಕ್ಕೆ ಅನುಗುಣವಾದ ನಿರುಕ್ತಿಯನ್ನೂ ರಚಿಸಿದ್ದಾರೆ.

ಶ್ರೀ ಮಧ್ವಾಚಾರ್ಯರು 'ವಿಷ್ಣುಸಹಸ್ರನಾಮ'ಕ್ಕೆ ಪರಮೋನ್ನತವಾದ ಸ್ಥಾನವನ್ನು ಕೊಟ್ಟಿದ್ದಾರೆ. 'ವಿಷ್ಣುಸಹಸ್ರನಾಮ'ದ ಮೊದಲನೆಯ ಶಬ್ದವಾದ 'ವಿಶ್ವಂ' ಎಂಬ ಶಬ್ದಕ್ಕೆ ಒಂದು ನೂರು ಅರ್ಥವನ್ನು ನಿರ್ಮಿಸಿದಾಗ ಪಂಡಿತರು ಅದನ್ನು ಪರಿಹರಿಸಲಾಗದೆ ಪರಾಜಿತರಾದರಂತೆ. ಆಚಾರ್ಯರ ಶಿಷ್ಯಪರಂಪರೆಯಲ್ಲಿ ಪ್ರಸಿದ್ಧರಾದ ರಾಘವೇಂದ್ರಸ್ವಾಮಿಯವರೂ ಉತ್ತರಾದಿ ಮಠಾಧಿಪತಿಗಳಾದ ಸತ್ಯಸಂಧತೀರ್ಥಯತಿಗಳೂ ರಚಿಸಿರುವ ಎರಡು ಭಾಷ್ಯಗಳೂ ದ್ವೈತಮತಾನುಗುಣವಾದ ಸಹಸ್ರನಾಮ ಭಾಷ್ಯಗಳು, ಸತ್ಯಸಂಧರ ಭಾಷೆಯು ಸಂಗ್ರಹವೂ, ಸುಲಭಶೈಲಿಯುತವೂ ಆಗಿದೆ. ಅದರಲ್ಲಿ ಪ್ರಕಾಶಿತವಾಗಿರುವ ಆಚಾರ್ಯ ಭಕ್ತಿ ಮತ್ತು ಭಗವದ್ಭಕ್ತಿಯು ಶ್ರೀ ಮಧ್ವಾಚಾರ್ಯರ 'ಸರ್ವಮೂಲದಿಂದ' ವಿಶೇಷ ಪ್ರಭಾವಿತವಾಗಿದೆ.

ಈ ಎಲ್ಲ ಭಾಗಗಳಲ್ಲಿಯೂ ಭಗವದ್ಗುಣಾಸ್ವಾದನೆ ಪ್ರಧಾನವಾಗಿರುವುದರಿಂದಲೂ ಎಲ್ಲವೂ ಅವರ ಅನುಭವಾಮೃತವಾಗಿರುವುದರಿಂದಲೂ ಎಲ್ಲವೂ ಸರ್ವಗ್ರಾಹ್ಯವಾಗಿವೆ.

ಈ ವಿಷ್ಣುಸಹಸ್ರನಾಮವು ಮಹಾಭಾರತದ ಅನುಶಾಸನ ಪರ್ವದ ಒಂದು ಭಾಗವಾಗಿದೆ. ಮಹಾತ್ಮನಾದ ಯುಧಿಷ್ಠಿರನು ಕೃಷ್ಣಪರಮಾತ್ಮನ ಕೃಪಾಕಟಾಕ್ಷದಿಂದ ಮಹಾಜ್ಞಾನಿಯೂ ಮಹಾಯೋಗಿಯೂ ಆದ ಭೀಷ್ಮಾಚಾರ್ಯನನ್ನು ಹೀಗೆಂದು ಕೇಳುವನು: "ಲೋಕದಲ್ಲಿ ಅದ್ವಿತೀಯನಾದ ದೇವರು ಯಾರು? ಯಾವನು ಏಕಪರಾಯಣ ಶುಭವನ್ನು ಪಡೆಯಲು ಯಾರನ್ನು ಸ್ತುತಿಸಬೇಕು? ಶ್ರೇಷ್ಠತಮವಾದ ಧರ್ಮವಾವುದು. ಯಾವುದನ್ನು ಸ್ತುತಿಸಿದರೆ ಮನುಷ್ಯನು ಜನ್ಮಸಂಸಾರ ಬಂಧನದಿಂದ ಬಿಡುಗಡೆ ಹೊಂದುವನು.'' ಎಂದು. ಅದಕ್ಕೆ ಭೀಷ್ಮಾಚಾರ್ಯನು ಮಹಾವಿಷ್ಣುವನ್ನೂ ಅವನ ಸಹಸ್ರನಾಮಗಳನ್ನೂ ಅನುಸಂಧಾನ ಮಾಡಬೇಕೆಂದು ಆ ಪ್ರಶ್ನೆಗಳಿಗೆ ಉತ್ತರವಾಗಿ ಉಪದೇಶಿಸುವನು. ಇದರಿಂದ ಸರ್ವವಿಧವಾದ ಇಷ್ಟಾರ್ಥವನ್ನು ಪಡೆಯಬಹುದೆಂದು ಆಶ್ವಾಸಿಸುವನು. 'ವಿಷ್ಣುಸಹಸ್ರನಾಮ'ದ ಉಪಸಂಹಾರಭಾಗವು ಫಲಶ್ರುತಿಯ ರೂಪದಲ್ಲಿದೆ. ಇದರ ಪಾರಾಯಣದಿಂದ ಎಲ್ಲ ಇಷ್ಟಾರ್ಥವೂ ಸಿದ್ಧಿಯಾಗುವುದೆಂದು ಅಲ್ಲಿ ಉಕ್ತವಾಗಿದೆ. ರೋಗಾದ್ಯುಪದ್ರವಗಳೆಲ್ಲ ಪರಿಹಾರವಾಗುವುದರಲ್ಲಿ ಸಂದೇಹವಿಲ್ಲ.

ಸಹಸ್ರನಾಮವನ್ನು ಕೇವಲ ಭಗವತ್ಪ್ರೀತ್ಯರ್ಥವಾಗಿಯೇ ಪಾರಾಯಣಮಾಡುವುದು ಉತ್ತಮ ಕಲ್ಪ. ಆರೋಗ್ಯ, ಆಯುಷ್ಯ, ಐಶ್ವರ್ಯಾದಿಗಳು ತಮ್ಮಷ್ಟಕ್ಕೆ ತಾವೇ ಲಭಿಸುತ್ತವೆ. ಫಲಶ್ರುತಿಯೂ ಭಗವಂತನ ನಾಮಸಂಕೀರ್ತನೆಯನ್ನೇ ಕುರಿತುದಾದುದರಿಂದ ಅವುಗಳ ಪಠನವೂ ಆವಶ್ಯಕವೇ.

ವಿಷ್ಣುಸಹಸ್ರನಾಮದಲ್ಲಿ ವಿವಿಧ ದೇವತೆಗಳ ಮತ್ತು ಸಿದ್ಧಾಂತಗಳ ಮತಾಚಾರ್ಯರಾದ ಸಿದ್ಧಾರ್ಥ, ಋಷಭ ಮೊದಲಾದ ಹೆಸರುಗಳಿದ್ದರೂ ಅವೆಲ್ಲ ವಿಶ್ವರೂಪಿಯೂ ಅನಂತನಾಮಧೇಯನೂ ಆದ ಪರಮ ಪುರುಷನದೇ ಆಗಿರುತ್ತದೆ. ಆತನು ವಿಶ್ವವ್ಯಾಪಿಯಾಗಿರುವುದು ಸಹಸ್ರನಾಮದ ಮುಂದಿನ ಉಪೋದ್ಘಾತದ ಧ್ಯಾನಶ್ಲೋಕಗಳಲ್ಲಿ ಪ್ರತ್ಯಕ್ಷವಾಗಿವೆ:–

ಕ್ಷೀರೋದನ್ವತ್ ಪ್ರದೇಶೇ ಶುಚಿಮಣಿ
ವಿಲಸತ್ ಸೈಕತೇ ಮೌಕ್ತಿಕಾನಾಂ
ಮಾಲಾಕ್ಲೃಪ್ತಾಸನಸ್ಥ ಸ್ಫಟಿಕಮಣಿ
ನಿಭೈರ್ಮೌಕ್ತಿಕೈರ್ಮಂಡಿತಾಂಗಃ
ಶುಭ್ರೈರಭ್ರೈರದಭ್ರೈರುಪರಿ ವಿರ
ಚಿತೈರ್ಮುಕ್ತ ಪೀಯೂಷವರ್ಷೈಃ
ಆನಂದೀ ನಃ ಪುನೀಯಾದರಿನಲಿನ ಗದಾ
ಶಂಖಪಾಣಿಃ ಮುಕುಂದಃ |

(36ನೇ ಪುಟ ನೋಡಿ)

# ಅದ್ವೈತ ದರ್ಶನ

ಯಾವ ಮಠಾಚಾರ್ಯರೂ, ತಾವು ಹೊಸದಾಗಿ ಮತಸ್ಥಾಪನೆಮಾಡಿರುವುದಾಗಿ ಹೇಳಿಕೊಂಡಿಲ್ಲ: ಶಂಕರಾಚಾರ್ಯರು ಇದಕ್ಕೆ ಹೊರತಲ್ಲ. ಅವರು ಇದ್ದು ಕಾಲಕ್ಕೆ ಆಸ್ತಿಕತೆಗೆ ಬಹು ಕಷ್ಟದೆಸೆ ಪ್ರಾಪ್ತವಾಗಿತ್ತು; ವೇದದ ಮೂಲತತ್ತ್ವಗಳನ್ನು ಮರೆಯಲಾಗಿತ್ತು. ಅದರ ಆಚರಣೆ ನಶಿಸಿ ಹೋಗಿತ್ತು. ತತ್ತ್ವಮಾರ್ಗವನ್ನು ವಿಚಾರಮಾಡುವವರು ಇರಲಿಲ್ಲ. ಜನರು ವೇದ ಮಾರ್ಗವನ್ನು ತ್ಯಜಿಸಿ, ನಾನಾ ದೇವತೆಗಳ ಉಪಾಸನೆಮಾಡಿದರು. ಜನರಲ್ಲಿ ಪರಸ್ಪರ ದ್ವೇಷ, ಕ್ಷೋಭೆ, ಕ್ರಾಂತಿ ಉಂಟಾಗಿತ್ತು. ಇಂತಹ ಕಷ್ಟದೆಸೆಯನ್ನು ತಪ್ಪಿಸಿ ಜನರ ಮನಸ್ಸನ್ನು ತತ್ತ್ವಮಾರ್ಗದ ಕಡೆಗೆ ತಿರುಗಿಸಲು ಶಂಕರ ಭಗವತ್ಪಾದರು ಪ್ರಯತ್ನಿಸಿದರು. ಅದರ ಮೂಲಕ ವೇದಾಂತ ತತ್ತ್ವದ ಬೆಳಕು ಹರಡಿತು.

ಪ್ರಪಂಚದ ಮೂಲವನ್ನು ತಿಳಿಯಲು ವಿಶ್ಲೇಷಣೆ ನಡೆಸಿದಾಗ, ಅದರಲ್ಲಿ ಚಿತ್, ಅಚಿತ್ ಮತ್ತು ಈಶ್ವರ ಇವೆ ಎಂದು ತಿಳಿದು ಬಂದಿದೆ. ಜಡ ಪದಾರ್ಥವಾದ ಅಚಿತ್ತು, ವ್ಯವಹಾರ ನಡೆಸುವ ಚಿತ್ತು ಅಥವ ಜೀವ, ಇವೆರಡೂ ಮೀರಿದ ಈಶ್ವರ ಇವು ಮೂರೂ ಇವೆ. ಈ ಮೂರರ ಸಂಬಂಧ ತಿಳಿಯುವುದೇ ತತ್ತ್ವಶಾಸ್ತ್ರ. ಶಾಂಕರ ದರ್ಶನದ ರೀತಿಯಾಗಿ ಈ ಮೂರೂ ಪರಸ್ಪರ ಬೇರೆಯಲ್ಲ. ಚಿತ್, ಅಚಿತ್–ಕೇವಲ ತೋರಿಕೆ, ಇವೆರಡೂ ಈಶ್ವರ, ಅಥವ ಬ್ರಹ್ಮನಿಂದ ಬೇರೆಯಲ್ಲ, ಚಿದಚಿದೀಶ್ವರರಲ್ಲಿ ಅಭೇದಜ್ಞಾನ ಪಡೆಯುವುದೇ ಜೀವನದ ಗುರಿ. ಅಜ್ಞಾನಕ್ಕೆ ಪೂರ್ವಸ್ಥಿತಿ ತೋರಿಕೆ, ಅಜ್ಞಾನ ದುಃಖ, ಅನಂತರದ ಸ್ಥಿತಿ ಆನಂದಮಯ. ಇದು ಅನುಭವವೇದ್ಯ ಎಂದು ತಿಳಿಸಲಾಗಿದೆ. ಇಂತಹ ಅನುಭವದ ಆಧಾರದ ಮೇಲೆ ಪ್ರಪಂಚದ ಎಲ್ಲ ವ್ಯವಹಾರಗಳು ಪ್ರಚಲಿತವಾಗುತ್ತವೆ. ಇಂತಹ ಅನುಭವರೂಪದಲ್ಲಿ ಆತ್ಮನ ಸತ್ತಾ ಸ್ವತಃ ಸಿದ್ಧವಾಗುತ್ತದೆ.

ಪ್ರಮಾಣಾದಿ ಸಕಲ ವ್ಯವಹಾರಗಳಿಗೂ ಆತ್ಮನೇ ಆಶ್ರಯನು. ಈ ವ್ಯವಹಾರಗಳ ಪೂರ್ವದಲ್ಲಿಯೇ ಆತ್ಮನು ಇದ್ದನು. ಆತ್ಮನನ್ನು ನಿರಾಕರಿಸಲು ಸಾಧ್ಯವಿಲ್ಲ. ಆಗಂತುಕ ವಸ್ತುವನ್ನು ನಿರಾಕರಿಸಬಹುದೇ ವಿನಹ ಸ್ವಾಭಾವಿಕವಾದುದನ್ನಲ್ಲ. ಆತ್ಮನು ಜ್ಞಾನರೂಪ ಮತ್ತು ಜ್ಞಾತಾ, ಜ್ಞಾತಾ ಜ್ಞಾನದಿಂದ ಬೇರೆಯಾಗುವುದಿಲ್ಲ. ಇವೆರಡೂ ಬೇರೆವಸ್ತುವಲ್ಲ. ಜ್ಞೇಯವು ಪದಾರ್ಥದ ಆವಿರ್ಭಾವವಾದಮೇಲೆ ಜ್ಞಾನವೇ ಜ್ಞಾತಾರೂಪದಿಂದ ಪ್ರಕಟಿತವಾಗುತ್ತದೆ. ಜ್ಞೇಯವಿಲ್ಲದಿರುವಾಗ ಜ್ಞಾತಾಕಲ್ಪನೆ ಉಂಟಾಗುವುದಿಲ್ಲ. ಜ್ಞೇಯರೂಪದಿಂದ ಜಗತ್ತು ಉಪಸ್ಥಿತವಾದಾಗ ಆತ್ಮನ ಜ್ಞಾನರೂಪವು ಉದಯವಾಗುತ್ತದೆ.

"ಆತ್ಮಾ ಆತ್ಮಾನಂ ಜಾನಾತಿ"–ಆತ್ಮನು ಆತ್ಮನನ್ನು ತಿಳಿಯುತ್ತಾನೆ. ಈ ವಾಕ್ಯದಲ್ಲಿ ಕರ್ತಾರೂಪ ಆತ್ಮ, ಕರ್ಮರೂಪ ಆತ್ಮ ಒಂದೇ ವಸ್ತು. ಲೇಖನಿಯನ್ನು ತಿಳಿಯುತ್ತೇನೆ ಎಂಬಲ್ಲಿ ಲೇಖನಿಯೊಡನೆ ನಮ್ಮ ಅಂತಃಕರಣ ಸಂಬಂಧ ಹೊಂದಿದಾಗ ಅದು ಲೇಖನಿರೂಪ ಧರಿಸುತ್ತದೆ. ಇದನ್ನು 'ವ್ಯಕ್ತಿ' ಎನ್ನಲಾಗಿದೆ. ಲೇಖನಿಯ ಜ್ಞಾನ ವ್ಯಕ್ತಿಜನ್ಯಜ್ಞಾನ. ಇದು ಅನಿತ್ಯ, ಲೇಖನಿ ಇರುವವರೆಗೆ ಈ ಜ್ಞಾನ ಇರುತ್ತದೆ. ಅನಂತರ



ಅದು ನಷ್ಟವಾಗುತ್ತದೆ. ಈ ವ್ಯಕ್ತಿಜನ್ಯಜ್ಞಾನ ಅನಿತ್ಯ. ಇದಕ್ಕೆ ಭಿನ್ನವಾದುದು ನಿತ್ಯಜ್ಞಾನ. ಇದೇ ವಾಸ್ತವ ಜ್ಞಾನ. ಇದು ಯಾವಾಗಲೂ ಒಂದೇ ರೂಪದಲ್ಲಿರುವುದು. ಆತ್ಮನ ಜ್ಞಾನ ಇಂತಹುದು. ಆತ್ಮನ ದೃಷ್ಟಿಯೂ ನಿತ್ಯ.

ಬ್ರಹ್ಮವಿಚಾರ – ಬ್ರಹ್ಮನ ವಾಸ್ತವ ಸ್ವರೂಪವನ್ನು ನಿರ್ಣಯಿಸಲು ಶಂಕರಾಚಾರ್ಯರು ಎರಡು ವಿಧ ಲಕ್ಷಣಗಳನ್ನು ಅಂಗೀಕರಿಸಿದ್ದಾರೆ. ಸ್ವರೂಪ ಲಕ್ಷಣ ಮತ್ತು ತಟಸ್ಥ ಲಕ್ಷಣ. ಸ್ವರೂಪಲಕ್ಷಣವು ಪದಾರ್ಥದ ಸತ್ಯವಾದ ತಾತ್ತ್ವಿಕ ರೂಪವನ್ನು ಪರಿಚಯಮಾಡಿ ಕೊಡುತ್ತದೆ. ತಟಸ್ಥ ಲಕ್ಷಣವು ಕೆಲವು ಸಮಯದವರೆಗೆ ಮಾತ್ರ ಇರುತ್ತದೆ. ಬ್ರಾಹ್ಮಣನೊಬ್ಬನು ರಂಗದಮೇಲೆ ಬಂದು ರಾಜನಪಾತ್ರ ಮಾಡಿದಾಗ, ರಂಗದ ಮೇಲಿರುವವರೆಗೆ ಅವನು ಕ್ಷತ್ರಿಯ ರಾಜ. ಇದು ತಟಸ್ಥ ಲಕ್ಷಣ. ರಂಗದ ಹೊರಗೆ ಬಂದಾಗ ಅವನು ಬ್ರಾಹ್ಮಣ. ಇದು ಸ್ವರೂಪಲಕ್ಷಣ. ಹಾಗೆಯೇ ಬ್ರಹ್ಮವು, ಜಗತ್ತಿನ ಉತ್ಪತ್ತಿ, ಸ್ಥಿತಿ, ಲಯ ಎಂಬ ಆಗಂತುಕ ಗುಣಗಳನ್ನು ಸಮಾವೇಶಗೊಳಿಸುವುದರಿಂದ ಅಗ ಅವು ಅವನ ತಟಸ್ಥಗುಣವಾಯಿತು. ಆದರೆ, ಸತ್, ಚಿತ್, ಆನಂದ ರೂಪದ್ದಾಗಿರುವಾಗ ಅವು ಬ್ರಹ್ಮನ ಸ್ವರೂಪ ಲಕ್ಷಣ.

ಸಗುಣ, ನಿರ್ಗುಣ ಬ್ರಹ್ಮನಲ್ಲಿ ಯಾವ ಭೇದವೂ ಇಲ್ಲ. ದೃಷ್ಟಿಕೋನದಿಂದ ಬೇರೆ ಬೇರೆಯಾಗಿರುವುದರಿಂದ ಅವು ಬೇರೆ ಎಂದು ವ್ಯವಹರಿಸಲಾಗಿದೆ: ನಾಟಕರಂಗದ ಮೇಲೆ ದುಷ್ಯಂತನ ಪಾತ್ರ ಮಾಡಿದ ವ್ಯಕ್ತಿ ನಾಟಕ ಮುಗಿದ ಮೇಲೆಯೂ ಅದೇ ವ್ಯಕ್ತಿ. ಬೇರೆ ಅಲ್ಲ. ಅವನು ಅದೇ ಮನುಷ್ಯ. ಬ್ರಹ್ಮನ ದೆಸೆಯೂ ಅದೇ ರೀತಿಯುದು. ಜಗತ್ತಿನ ಸೃಷ್ಟಿ, ಸ್ಥಿತಿ, ಲಯ ಸಂಬಂಧ ಇರುವವರೆಗೆ ಬ್ರಹ್ಮವು ಈಶ್ವರ ಎನ್ನಿಸಿಕೊಳ್ಳುವುದು. ಸಗುಣ, ನಿರ್ಗುಣ ಬ್ರಹ್ಮರಲ್ಲಿ ಭೇದವನ್ನೆಣಿಸುವುದು ಬರೀ ಭ್ರಮೆ. ನಿರ್ಗುಣ ಬ್ರಹ್ಮನೇ ನಿಜವಾಗಿ ಪಾರಮಾರ್ಥಿಕವಾಗಿ ಸತ್ತಾ. ವ್ಯಾವಹಾರಿಕವಾಗಿ ಉಪಾಸನೆಗೋಸ್ಕರ ಸಗುಣ ಬ್ರಹ್ಮ ಎಂದು ಪರಿಗಣಿಸಲಾಗಿದೆ. ತತ್ತ್ವ ಒಂದೇ. ಸಗುಣ ಬ್ರಹ್ಮನ ಪೂಜೆಯಮೂಲಕ ಉಪಾಸನೆ ಮಾಡಿ ಚಿತ್ತಶುದ್ಧಿ ಹೊಂದಿ, ವಿಶುದ್ಧ ಮಾರ್ಗವನ್ನು ಅವಲಂಬಿಸಿ ನಿರ್ಗುಣ ಬ್ರಹ್ಮನನ್ನು ಹೊಂದಬಹುದೇ ವಿನಹ ಅನ್ಯಥಾ ಸಾಧ್ಯವಿಲ್ಲ.

ಅದ್ವೈತಸಿದ್ಧಿಗಾಗಿ ಯುಕ್ತಿ :— ಬ್ರಹ್ಮನ ಅದ್ವೈತ ತತ್ತ್ವವನ್ನು ಸಿದ ಮಾಡುವುದಕ್ಕಾಗಿ, ಶಂಕರಾಚಾರ್ಯರು ಸುಂದರವಾದ ಯುಕ್ತಿಯನ್ನು ಪ್ರದರ್ಶಿಸಿದ್ದಾರೆ. ಬ್ರಹ್ಮವು ಕೇವಲಶ್ರುತಿಯ ಆಧಾರದಿಂದ ಪ್ರತಿಷ್ಠಿತವಾದ ಮೂಲತತ್ತ್ವವಾಗಿರದೆ, ಯುಕ್ತಿಗಳಿಂದ ಅದರ ಸಿದ್ಧಿಯನ್ನು ತೋರಿಸಬಹುದು.

ಕಾರ್ಯ ಕಾರಣ ಸಂಬಂಧವನ್ನು ವಿಚಾರ ಮಾಡುವಾಗ ಕಾರ್ಯವು ಕಾರಣದಿಂದ ಉತ್ಪನ್ನ

ಶ್ರೀ ಡಿ. ಕೃಷ್ಣಅಯ್ಯಂಗಾರ್

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ. ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸ ಬೇಕು.

1) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ–517507
ಚಿತ್ತೂರು ಜಿಲ್ಲೆ, ಆಂ. ಪ್ರ.

ವಾಗುವುದಕ್ಕಿಂತ ಮೊದಲು ವಿದ್ಯಮಾನವಾಗಿತ್ತೆಂಬುದು ಸ್ಪಷ್ಟ. ಕಾರ್ಯವು ಕಾರಣದಿಂದ ಬೇರೆಯಾದ ವಸ್ತುವಲ್ಲ, ಮಣ್ಣಿನಿಂದ ಮಾಡಿದ ಎಷ್ಟೇ ವಸ್ತುಗಳಿದ್ದರೂ, ವಾಸ್ತವವಾಗಿ ಅವೆಲ್ಲ ಮಣ್ಣೇ ಆಗಿರುವುದು, ಚಿನ್ನದಿಂದ ಮಾಡಿದ ಆಭರಣಗಳೆಲ್ಲ ಕೊನೆಯಲ್ಲಿ ಚಿನ್ನವೇ ಅಲ್ಲವೇ? ಕಾರ್ಯವು ಕಾರಣದಿಂದ ದೊರೆಯುವ ನೂತನ ವಸ್ತು ಎಂದು ತಿಳಿಯುವುದು ಮಿಥ್ಯೆ. ಕಾರಣದಲ್ಲಿ ಕಾರ್ಯವು ಮೊದಲಿನಿಂದ ಇದೆ. ಆದರೆ ಅದು ಅವ್ಯಕ್ತರೂಪದಲ್ಲಿದೆ. ನಿಮಿತ್ತ ಕಾರಣದಿಂದ ಆ ಅವ್ಯಕ್ತರೂಪವು ವ್ಯಕ್ತವಾಗುತ್ತದೆ. ಸತ್ ವಸ್ತುವಿನಿಂದ ಅಸದ್ವಸ್ತುವಿನ ಉತ್ಪತ್ತಿ ಸಾಧ್ಯವಿಲ್ಲ. ಆ ರೀತಿ ಆಗುವುದಾಗಿದ್ದರೆ ಎಳ್ಳಿನಿಂದ ಎಣ್ಣೆ ತೆಗೆಯುವ ಬದಲು ಮರಳಿನಿಂದ ಎಣ್ಣೆ ತೆಗೆಯಬಹುದಾಗಿತ್ತು, ಆದರೆ ಅದು ಸಾಧ್ಯವಿಲ್ಲ. ಅಂದರೆ ಕಾರ್ಯವು ಕಾರಣದಲ್ಲಿರುತ್ತದೆ ಎಂಬುದು ಇದರ ತಾತ್ಪರ್ಯ.

ಶಂಕರಾಚಾರ್ಯರ ವಿವರಣೆ ಹೀಗಿದೆ – ಜಗತ್ತಿನ ಕಾರ್ಯಗಳಲ್ಲಿ ಹೊಸರೂಪ ಮತ್ತು ಆಕಾರಗಳು ಉತ್ಪನ್ನವಾಗುತ್ತವೆ. ಪ್ರತ್ಯಕ್ಷವಾದ ಈ ವಿಚಾರವನ್ನು ಅಂಗೀಕರಿಸಲು ಸಾಧ್ಯವಿಲ್ಲ. ಸೂಕ್ಷ್ಮವಾಗಿ ವಿಚಾರ ಮಾಡಿದರೆ ಆಕಾರವು ಪದಾರ್ಥದಿಂದ ಬೇರೆಯಾದ ಹೊಸವಸ್ತುವಲ್ಲ. ಆಕಾರವು ಪದಾರ್ಥದ ಒಂದು ಅವಸ್ಥಾವಿಶೇಷ. ಅದು ಪದಾರ್ಥದಿಂದ ಬೇರೆ ಅಲ್ಲ. ಆಕಾರದಲ್ಲಿ ಪರಿವರ್ತನೆ ಉಂಟಾದರೂ ವಸ್ತು ಒಂದೇ.

'ಮೃತ್ತಿಕಾ' ಒಂದೇ ವಸ್ತುವಾಗಿರುವುದು. ಕುಂಬಾರನ ಕೆಲಸದಿಂದ ಘಟ ರೂಪದಲ್ಲಿ ಕಾಣುವುದು. ಮಿಥ್ಯಾರೂಪವಾದುದು. ಮಿಥ್ಯೆಯು ನಾಮರೂಪಗಳ ಕಲ್ಪನೆ. ಫಲಸ್ವರೂಪವಾಗಿ ಕಾರಣ ಒಂದೇ ಸತ್ತಾ. ಕಾರ್ಯರೂಪದಲ್ಲಿ ಕಾಣುವ ಪರಿವರ್ತನೆ ಕೇವಲ ಮಾನಸಿಕ ಆರೋಪವೇ ವಿನಹ ವಾಸ್ತವವಲ್ಲ. ಈ ಮಾನಸಿಕ ಆರೋಪವನ್ನು ಶಂಕರಾಚಾರ್ಯರು 'ಅಧ್ಯಾಸ' ಎಂದು ಕರೆದಿದ್ದಾರೆ. ಸಮಸ್ತ ಆಕಾರಗಳು ಮಿಥ್ಯಾಭೂತ, ಕಾರಣ ಅಸತ್ಯ, ಕಾಲ್ಪನಿಕ ಪರಿವರ್ತನೆ— ಇತ್ಯಾದಿಗಳನ್ನು ಅದ್ವೈತ ಪರಿಭಾಷೆಯಲ್ಲಿ 'ವಿವರ್ತ' ಎಂದು ಕರೆಯಲಾಗಿದೆ.

ಯುಕ್ತಿಯ ಆಧಾರದ ಮೇಲೆ ವಿಚಾರಮಾಡಿದಾಗ, ಜಗತ್ತಿನ ಸಮಸ್ತ ಆಕಾರಗಳು ಮಿಥ್ಯಾ ಎಂದು ತಿಳಿದುಬರುತ್ತವೆ. ಸಮಸ್ತ ಗುಣಗಳು ಅಸತ್ಯ ಎಂದು ಸಿದ್ಧವಾಗುತ್ತವೆ. ಆಗ ಸರ್ವತ್ರ ವಿದ್ಯಮಾನವಾಗಿರುವ ವಸ್ತು ಯಾವುದೆಂಬ ಪ್ರಶ್ನೆ ಉದ್ಭವಿಸುತ್ತದೆ. ಘಟವೆಂಬ ವಾಸ್ತವವಾದ ವಸ್ತುವಿಲ್ಲ. ವಸ್ತುತಃ ಮಣ್ಣು ಒಂದೇ ಸತ್ತಾ. ಈ ಸತ್ತಾವನ್ನು ಜಗತ್ತಿನ ಮೂಲವಸ್ತು ಅಥವ ಉಪಾದಾನ ಕಾರಣ ಎಂದು ಅಂಗೀಕರಿಸಬೇಕಾಗುತ್ತದೆ. ಅದು ಭೌತಿಕ ಪದಾರ್ಥಗಳಲ್ಲಿ ಅಲ್ಲದೆ ಮಾನಸಿಕ ವ್ಯಾಪಾರಗಳಲ್ಲಿಯೂ ಇರುತ್ತದೆ. ಹೀಗೆ ಯುಕ್ತಿಯ ದ್ವಾರಾ ಈ ತಥ್ಯದ ವಿಷಯವನ್ನು ತಲಪುತ್ತೇವೆ. ಸಂಸಾರದ ಮೂಲ ಕಾರಣವು ನಾನಾರೂಪದಲ್ಲಿ ಪ್ರಕಟವಾದರೂ, ಸ್ವಯಂ ನಿರಾಕಾರ, ನಿರವಯವವಾಗಿರುವ ಈ ಶುದ್ಧ ಸತ್ತ್ವಕ್ಕೆ ಬ್ರಹ್ಮವೆಂಬ ಸಂಜ್ಞೆ ಇರುವುದು. ಈ ಬ್ರಹ್ಮವು ಏಕವೇ ಹೊರತು ಅನೇಕವಲ್ಲ. ಅದ್ವೈತವಾದವನ್ನು ಯುಕ್ತಿಯಿಂದ ಪೋಷಿಸುವುದಕ್ಕೆ ಇದೇ ಆಧಾರ.

ಮಾಯಾ :— ನಿರ್ವಿಶೇಷ, ನಿರ್ಲಕ್ಷಣವಾದ ಬ್ರಹ್ಮದಿಂದ, ಸವಿಶೇಷ, ಸಲ್ಲಕ್ಷಣವಾದ ಜಗತ್ತು ಹೇಗುಂಟಾಯಿತು? ಒಂದೇ ಬ್ರಹ್ಮದಿಂದ ನಾನಾತ್ಮಕ ಸೃಷ್ಟಿ, ಸ್ಥಿತಿ ಹೇಗೆ ಉಂಟಾಯಿತು? ಇವುಗಳ ಉತ್ತರ ತಿಳಿಯುವುದಕ್ಕೆ ಮಾಯೆಯ ಸ್ವರೂಪ ತಿಳಿಯುವುದು ಅಗತ್ಯ. ಶಂಕರಾಚಾರ್ಯರು ಮಾಯಾ, ಅವಿದ್ಯೆ ಎಂಬ ಶಬ್ದಗಳನ್ನು ಸಮಾನಾರ್ಥದಲ್ಲಿ ಉಪಯೋಗಿಸುತ್ತಾರೆ. ಪರಮೇಶ್ವರನ ಬೀಜ ಶಕ್ತಿಯ ಹೆಸರು ಮಾಯಾ. ಮಾಯಾ ರಹಿತನಾದ ಪರಮೇಶ್ವರನಲ್ಲಿ ಪ್ರವೃತ್ತಿಯುಂಟಾಗುವುದಿಲ್ಲ. ಆಗ ಅವನು ಜಗತ್ತನ್ನು ಸೃಷ್ಟಿಮಾಡುವುದಿಲ್ಲ. ಅವಿದ್ಯಾತ್ಮಕ ಈ ಬೀಜ ಶಕ್ತಿಯನ್ನು ಅವ್ಯಕ್ತ ಎಂದು ಕರೆಯಲಾಗಿದೆ. ಇದು ಪರಮೇಶ್ವರನನ್ನು ಆಶ್ರಯಿಸಿರುವ ಮಹಾ ಸುಷುಪ್ತಿ ರೂಪಿಣಿ. ತನ್ನ ಸ್ವರೂಪವನ್ನು ತಿಳಿಯದಿರುವ ಜೀವನು ಇದರಲ್ಲಿ ಮಲಗಿರುವನು ಅಗ್ನಿಯ ದಾಹಕ ಶಕ್ತಿಯಂತೆ ಮಾಯೆಯು ಬ್ರಹ್ಮನಲ್ಲಿ ಸದಾ ಇರುವ ಶಕ್ತಿ. ತ್ರಿಗುಣಾತ್ಮಕವಾದ ಮಾಯೆಯು ಜ್ಞಾನ ವಿರೋಧಿಯಾದ ಭಾವ ರೂಪ ಪದಾರ್ಥವಾಗಿರುತ್ತದೆ. ಮಾಯೆಯು ಸತ್ ಆಗಲಿ, ಅಸತ್ ಆಗಲಿ ಅಲ್ಲ. ಇವೆರಡಕ್ಕಿಂತ ಅದು ವಿಲಕ್ಷಣವಾಗಿರುವುದರಿಂದ ಅದನ್ನು ಅನಿರ್ವಚನೀಯ ಎಂದು ಕರೆಯಲಾಗಿದೆ. ಯಾವ ಪದಾರ್ಥವನ್ನು ಸದ್ರೂಪದಿಂದಲಾಗಲಿ, ಅಸದ್ರೂಪದಿಂದಲಾಗಲಿ ವರ್ಣಿಸಲು ಸಾಧ್ಯವಿಲ್ಲವೋ ಅದು ಅನಿರ್ವಚನೀಯ. ಇದು ಶಾಸ್ತ್ರ ಸಂಜ್ಞೆ.

ಪದಾರ್ಥಗಳ ರೂಪವು ಸತ್ ಮತ್ತು ಅಸತ್ ಎಂದು ಎರಡುವಿಧ. ಯಾವ ಪದಾರ್ಥವು ಸದಾ ಏಕರೂಪವಾಗಿ, ಜ್ಞಾನದಿಂದ ಬಂಧ ಹೊಂದುವುದಿಲ್ಲವೋ ಅದು ಸತ್. ನಿರ್ಬಂಧವಾದ ವಸ್ತು ಸತ್ ಆಗಿರುತ್ತದೆ. ಇತರ ಜ್ಞಾನ

(32 ನೇ ಪುಟ ನೋಡಿ)

# ಕರ್ನಾಟಕದಲ್ಲಿ ಅದ್ವೈತಕ್ಕೆ ರಾಜಾಶ್ರಯ

ಶ್ರೀ ಕೆ. ರಮಾನಂದ

ರಾಜಕೀಯ ಇತಿಹಾಸದಲ್ಲಿ, ರಾಜರ ಜೀವನದಲ್ಲಿ, ಜನಸಾಮಾನ್ಯರ ಬದುಕಿನಲ್ಲಿ 'ಮತ' ಮಹತ್ತ್ವಪೂರ್ಣವಾದ ಪಾತ್ರವನ್ನು ಪಡೆದಿದೆ. ಅನೇಕ ಮತಗಳ ತವರೂರೆಂದು ಖ್ಯಾತವಾಗಿರುವ ಭಾರತದೇಶದಲ್ಲಿ, ಅದ್ವೈತ ಮತವು ಪ್ರಸಿದ್ಧವಾದ ಮತವಾಗಿರುವುದಷ್ಟೇ ಅಲ್ಲ, ಅದು ಸಾಕಷ್ಟು ಪ್ರಾಚೀನತೆಯನ್ನು ಪಡೆದಿರುವ ಮತವೂ ಹೌದು. ಪ್ರಸ್ತುತ ಲೇಖನದಲ್ಲಿ ಪರಮ ಪೂಜ್ಯರಾದ ಶಂಕರಾಚಾರ್ಯರಿಂದ ಸ್ಥಾಪಿಸಲ್ಪಟ್ಟ ಅದ್ವೈತಮತ ರಾಜಮನೆತನಗಳ ಕಾಲದಲ್ಲಿ ಹೇಗೆ ವೃದ್ಧಿಯಾಯಿತು ಎಂಬುದನ್ನು ವಿವರಿಸಲಾಗಿದೆ. ಇದರಲ್ಲಿ ಕರ್ನಾಟಕದ ಪ್ರಸಿದ್ಧ ರಾಜಮನೆತನಗಳಾದ ವಿಜಯನಗರದ ದೊರೆಗಳು, ಕೆಳದಿಯ ನಾಯಕರು, ಪಾಳೆಯಗಾರರು, ಮೈಸೂರು ಒಡೆಯರು ಹಾಗೂ ಹೊರನಾಡಿನ ರಾಜಮನೆತನವಾದ ಮರಾಠರು ಅಲ್ಲದೆ ಮುಸ್ಲಿಂ ಹಾಗು ಇಂಗ್ಲೀಷರು ಇವರೊಡನೆ ಅದ್ವೈತಮತ ಬೆಳೆದು ಬಂದ ಪರಿ, ಇವರುಗಳು ಅದ್ವೈತ ಮತದ ಹೃದಯದಂತಿರುವ ಶೃಂಗೇರಿ ಸಂಸ್ಥಾನಕ್ಕೆ ನೀಡಿದ ಕಾಣಿಕೆಗಳು ಇದನ್ನು ಕುರಿತು ವಿವೇಚಿಸಲಾಗಿದೆ.

ಪೂಜ್ಯ ಶ್ರೀ ಶಂಕರಾಚಾರ್ಯರ ಕಾಲದಲ್ಲಿಯೇ ಕೇರಳದ ದೊರೆಯಾದ ರಾಜಶೇಖರ, ವಿದರ್ಭ ದೇಶದ ದೊರೆ, ಸುಧನ್ವನೆಂಬ ದೊರೆ ಇವರೇ ಮೊದಲಾದವರು ಅದ್ವೈತಮತಕ್ಕೆ ಬದ್ಧರಾಗಿ ಅದನ್ನು ಪ್ರಚಾರ ಮಾಡಲು ಪ್ರಯತ್ನಿಸಿದ ವಿಚಾರ 'ಗುರುವಂಶ ಕಾವ್ಯ' 'ಶಂಕರವಿಜಯ' ಮೊದಲಾದವುಗಳಲ್ಲಿ ದೊರೆಯುತ್ತದೆ.

ಕರ್ನಾಟಕದಲ್ಲಿದ್ದ, ಹೊಯಿಸಳ ದೊರೆಗಳ ಕಾಲದಲ್ಲಿಯೂ ಅದ್ವೈತಮತಕ್ಕೆ ರಾಜರ ರಕ್ಷೆ ಸಿಕ್ಕಿರಬಹುದೆಂದೂಹಿಸಲು ಅವಕಾಶವಿದೆ.

ಅದ್ವೈತಮತ ಎಂಬ ವೃಕ್ಷ ತನ್ನ ಕೊಂಬೆಗಳೊಡನೆ ವಿಶಾಲವಾಗಿ ಬೆಳೆಯಲಾರಂಭಿಸಿದ್ದು ವಿಜಯನಗರದ ದೊರೆಗಳ ಕಾಲದಲ್ಲೇ ಎನ್ನಬಹುದು. ವಿಧರ್ಮೀಯರ ಕಾಲ್ತುಳಿತಕ್ಕೆ ಒಳಗಾಗಿ ಹಿಂದೂ ಧರ್ಮ ನಶಿಸಿಹೋಗುವಂತಹ ಸಮಯದಲ್ಲಿ–ದಕ್ಷಿಣ ಭಾರತದಲ್ಲಿ ವಿಜಯನಗರ ಸಾಮ್ರಾಜ್ಯ ಪ್ರತಿಷ್ಠಾಪಿತವಾಯಿತು. ಇದನ್ನು ಸ್ಥಾಪಿಸಿದವರು ಅದ್ವೈತಿಗಳಾದ ಪೂಜ್ಯ ವಿದ್ಯಾರಣ್ಯರು. ಹರಿಹರ – ಬುಕ್ಕರೆಂಬ ಇಬ್ಬರು ಸೋದರರಿಗೆ ದೀಕ್ಷೆಯನ್ನು ಕೊಟ್ಟು, ಅವರಿಂದ ಹಿಂದೂ ಸಾಮ್ರಾಜ್ಯ ನಿರ್ಮಾಣ ಮಾಡಿಸಿದರು. ವಿದ್ಯಾರಣ್ಯರು ತುಂಗೆಯ ತಟದಲ್ಲಿನ ಶೃಂಗೇರಿಯಿಂದ ಬಂದವರೆಂಬ ಐತಿಹ್ಯವಿದೆ. ಗುರುಗಳೇ ಅದ್ವೈತಿಗಳಾದ ಕಾರಣ ಚಕ್ರವರ್ತಿಗಳೆಂದೆನಿಸಿಕೊಂಡ ಹಕ್ಕ – ಬುಕ್ಕರು ಶೃಂಗೇರಿಗೆ ಅನೇಕ ದಾನಗಳನ್ನು ನೀಡಿ, ಅಗ್ರಹಾರಗಳನ್ನು ನಿರ್ಮಿಸಿ ದಾನ ಮಾಡಿದರು. ಅದ್ವೈತಮತದ ಪ್ರಚಾರ ಕಾರ್ಯದಲ್ಲಿ ನೆರವಾದರು. ಶೃಂಗೇರಿಗೆ ಈ ಚಕ್ರವರ್ತಿಗಳು ನೀಡಿದ ಒಟ್ಟು ದಾನದ ಬೆಲೆ ಸುಮಾರು ಮೂರು ಸಾವಿರದ ಮೂರು ಪಗೋಡಗಳಾಗಬಹುದು. ಅನೇಕ ದೇವಾಲಯಗಳು, ಗುಡಿಗುಂಡಾರಗಳು, ಕೆರೆಗಳು, ಭಾವಿಗಳು, ಅನ್ನಸತ್ರಗಳು ಈ ಕಾಲದಲ್ಲಿ ನಿರ್ಮಿತವಾದವು. ಅದ್ವೈತಮತದೊಂದಿಗೆ ದ್ವೈತ – ವಿಶಿಷ್ಟಾದ್ವೈತ, ಹೀಗೆ ಎಲ್ಲಾ ಮತಗಳ ಜನರೂ ಒಂದಾಗಿ ಸನಾತನ ಧರ್ಮ ರಕ್ಷಣೆಯಲ್ಲಿ ಕಾರ್ಯಮಗ್ನರಾಗಿದ್ದರು. 'ಸುಭಾಷಿತ ಸುಧಾನಿಧಿ' ಜೀವನಮುಕ್ತಿ ವಿವೇಕ' 'ಅಲಂಕಾರ ಸುಧಾನಿಧಿ' ಇವೇ ಮೊದಲಾದ ಅನೇಕ ಅದ್ವೈತ ಗ್ರಂಥಗಳ ಉಗಮ ಈ ಕಾಲದಲ್ಲಾಯಿತು.

ಪ್ರೌಢದೇವರಾಯ, ದೇವರಾಯ, ಇಮ್ಮಡಿ ಹರಿಹರ ಮೊದಲಾದ ಅನೇಕರು ಹಿಂದಿನ ಪರಂಪರೆಯಂತೆ ಅದ್ವೈತಮತಕ್ಕೆ ರಕ್ಷಣೆಯನ್ನು ನೀಡಿದ್ದರು. ಈ ರಾಜಮನೆತನದ ಪ್ರಸಿದ್ಧ ದೊರೆ ಕೃಷ್ಣದೇವರಾಯನೂ ಸಹ ದಿಗ್ವಿಜಯಗಳಿಗೆ ಹೊರಡುವ ಮೊದಲು ಸ್ವಾಮಿಗಳ ಆಶೀರ್ವಾದ ಪಡೆಯುತ್ತಿದ್ದನು.

ತಾಳೀಕೋಟೆಯ ಯುದ್ಧದ ನಂತರ ಹಿಂದೂ ಸಂಸ್ಕೃತಿಯೇ ನಾಶವಾಗುವಂತಹ ಪರಿಸ್ಥಿತಿ ಬಂದಾಗಲೂ ಅದ್ವೈತಮತ ಅಳಿಯಲಿಲ್ಲ. ವಿಜಯನಗರದ ದೊರೆಗಳ ರಕ್ಷಣೆಯಲ್ಲಿ ವೃದ್ಧಿಯಾದ ಅದ್ವೈತ ಮತವು ವಿಜಯನಗರದ ಪತನದೊಡನೆ ಕ್ಷೀಣಿಸದೆ ಮತ್ತೆ ಮುಂದುವರೆಯಿತು.

ವಿಜಯನಗರವು ಪತನ ಹೊಂದಿದ ಮೇಲೆ ಹಿಂದೂ ಸಂಸ್ಕೃತಿಯನ್ನು ಪೋಷಿಸಿಕೊಂಡು ಬಂದವರಲ್ಲಿ ಕೆಳದಿಯ ನಾಯಕರು ಮುಖ್ಯರಾಗಿದ್ದಾರೆ. ಶೈವ ಮತದವರಾದರೂ ಈ ಅರಸರು ಅದ್ವೈತದ ಸಂದೇಶವನ್ನು ಸ್ವೀಕರಿಸಿದ್ದರು. ಅದ್ವೈತಮತದಿಂದ ಆಕರ್ಷಿತರಾಗಿದ್ದ ಈ ನಾಯಕರಿಗೂ ಅದ್ವೈತಮತ ಪ್ರಚಾರದ ಪ್ರಮುಖ ಕೇಂದ್ರವಾದ ಶೃಂಗೇರಿ ಪೀಠಕ್ಕೂ ಒಂದನೆಯ ವೆಂಕಟಪ್ಪನಾಯಕನಿಂದ ಆರಂಭವಾದ ಸಂಬಂಧ ಕೊನೆಯವರೆಗೂ ಮುಂದುವರೆದಿತ್ತು.

ರಾಜ ಒಂದನೆಯ ವೆಂಕಟಪ್ಪನಾಯಕನು, ಶೃಂಗೇರಿಯಲ್ಲಿ ಆಗಿನ ಸ್ವಾಮಿಗಳಾದ ಅಭಿನವ ನರಸಿಂಹ ಭಾರತಿಯವರಿಗೆ ವಿಶೇಷ ಅನುಕೂಲಗಳನ್ನು ಮಾಡಿಕೊಟ್ಟು ಬ್ರಾಹ್ಮಣರಿಗಾಗಿ ಅಗ್ರಹಾರಗಳನ್ನು ದಾನ ನೀಡಿದನು. 'ಶೃಂಗೇರಿ ಪುನಃ ಸ್ಥಾಪಕ' 'ವೈದಿಕ–ಅದ್ವೈತ–ಸಿದ್ಧಾಂತ–ಪ್ರತಿಷ್ಠಾಪನಾಚಾರ್ಯ' ಬಿರುದುಗಳು ವೆಂಕಟಪ್ಪನಾಯಕನಿಗಿದ್ದವು.

ವೀರಭದ್ರನಾಯಕನು–ಚಾವಡಿ ಸೆಟ್ಟಿಕೊಪ್ಪ ಗ್ರಾಮವನ್ನು ಶೃಂಗೇರಿಯ ಆಚಾರ್ಯರಿಗೆ ದಾನ ಮಾಡಿದ್ದರೆ, ದೊರೆ ಶಿವಪ್ಪನಾಯಕನು ಶೃಂಗೇರಿ ಮಠದ ಸಂಪತ್ತನ್ನು ಅಪಹರಿಸುವವರ ವಿರುದ್ಧ ಕಠಿಣ ಕ್ರಮಗಳನ್ನು ಕೈಗೊಂಡನು. ಅನೇಕ ದಾನಗಳನ್ನು ನೀಡಿದ ದೊರೆ ಬ್ರಾಹ್ಮಣರಿಗಾಗಿ ಅಗ್ರಹಾರಗಳನ್ನು ಕಟ್ಟಿಸಿದುದು ಮಾತ್ರವಲ್ಲ, ವಾಜಪೇಯಾದಿ ಯಾಗಗಳನ್ನು ನಿರ್ವಹಿಸಿದ ಧೀರ. ಎಲ್ಲಾ ಪ್ರಜೆಗಳನ್ನು ಒಂದೇ ಸಮನಾಗಿ ಕಾಣುತ್ತಿದ್ದ ಶಿವಪ್ಪನಾಯಕ ಉದಾರಿಯಾದ ರಾಜನಾಗಿದ್ದ.

ಇಮ್ಮಡಿ ಭದ್ರಪ್ಪನಾಯಕ, ಇಮ್ಮಡಿ ಸೋಮಶೇಖರ ಮತ್ತು ಇಮ್ಮಡಿ ಬಸವಪ್ಪ ಇವರ ಆಳ್ವಿಕೆಯಲ್ಲಿಯೂ ಶೃಂಗೇರಿಗೆ ಅನೇಕ ದಾನಗಳನ್ನು ನೀಡಲಾಯಿತು. ಹಾಗೂ ಅದ್ವೈತ ಮಠೀಯರಿಗೆ ಕಿರುಕುಳ ನೀಡುತ್ತಿದ್ದವರನ್ನು ಶಿಕ್ಷಿಸುವುದರಲ್ಲೂ ಇತರ ಕಡೆಗಳಿಂದ ಪೀಠಕ್ಕೆ ವಸೂಲಾಗಬೇಕಾದ ಕಂದಾಯ ಸುಂಕಗಳನ್ನು ವಸೂಲು ಮಾಡಿಕೊಡುವುದರಲ್ಲಿಯೂ ಈ ನಾಯಕರುಗಳು ನೆರವಾದರು.

ಪ್ರತಿಭಾಶಾಲಿನಿಯಾದ ರಾಣಿ ಚೆನ್ನಮ್ಮಾಜಿಯು ಅದ್ವೈತಮತದ ಪರವಾಗಿ ಹೆಚ್ಚಿನ ವಿಶ್ವಾಸವನ್ನು ಹೊಂದಿದ್ದಳು. ಸ್ಥಿರಸಂಕಲ್ಪವುಳ್ಳ ಈ ಮಹಾರಾಣಿಗೆ ಇಂತಹ ಶ್ರದ್ಧೆಯುಂಟಾದುದು ಶೃಂಗೇರಿ ಜಗದ್ಗುರುಗಳೆಂದಲೇ ಎನ್ನಬಹುದು. ತನ್ನ ದತ್ತುಮಗನಾದ ಬಸವಪ್ಪನಿಗೆ ಚೆನ್ನಮ್ಮಾ

ಜಿಯು ಹೇಳಿದ ನುಡಿಗಳು 'ಶಾಂಕರ ದಕ್ಷಿಣಾಮ್ನಾಯ ಪೀಠ' ಎಂಬ ಪುಸ್ತಕದಲ್ಲಿದೆ. ಅದನ್ನೇ ಇಲ್ಲಿ ಕೊಡಬಹುದು. ಚೆನ್ನಮ್ಮಾಜಿ ಈ ರೀತಿ ಹೇಳಿದಳಂತೆ. "ಧರ್ಮತತ್ತ್ವಗಳನ್ನು ಧ್ಯಾನಿಸು. ಅದ್ವೈತದ ಸತ್ಯವನ್ನು ಸಾಧಿಸು, ವೈದಿಕ ತತ್ತ್ವಪ್ರವೀಣರನ್ನು ಸನ್ಮಾನಿಸು. ಜೀವನವನ್ನು ಸ್ವಪ್ನದಂತೆ ನೋಡು ಮತ್ತು ನಾನು ಯಾರು ಎಂಬ ಪ್ರಶ್ನೆಯನ್ನು ಮನನಮಾಡು. ಶಾಶ್ವತವಾದ ಆನಂದವನ್ನು ಅನುಭವಿಸುವುದಕ್ಕೋಸ್ಕರ ಶಿವನನ್ನು ಆರಾಧಿಸು" ಹೀಗೆಂದು ಮಗನಿಗೆ ಉಪದೇಶಿಸಿದ ಮಹಾರಾಣಿಯು ವೀರಶೈವಳಾದರೂ ಅದ್ವೈತ ಮತವನ್ನು ಪೋಷಿಸಿಕೊಂಡು ಬಂದಿದ್ದು ಮೆಚ್ಚತಕ್ಕ ವಿಷಯವಾಗಿದೆ.

ಕೆಳದಿನಾಯಕರಂತೆ ಪಂಥಾಭಿಮಾನವನ್ನು ಬಿಟ್ಟು ಜಾತಿದ್ವೇಷದ ಲವಲೇಶವೂ ಇಲ್ಲದೆ, ಸಕಲ ಜಾತಿಮತ ಪಂಥಗಳನ್ನೂ ಒಂದೇರೀತಿಯಾಗಿ ಗೌರವಿಸುವ ರಾಜರು ಕಡಿಮೆಯೇ ಸರಿ.

ಭಯವರಿಯದ ಕಲಿಗಳೆಂದು ಖ್ಯಾತರಾದ ಕರ್ನಾಟಕದ ಪಾಳೆಯಗಾರರಲ್ಲಿ ಗುಮ್ಮನಾಯಕನ ಪಾಳ್ಯದ ಗುಮ್ಮನಾಯಕ, ಬೇಲೂರಿನ ವೆಂಕಟಾದ್ರಿನಾಯಕ, ಕೊಡಗಿನ ವೀರಪ್ಪ ಒಡೆಯ, ಜುಗುಲಿಯ ಬಸಪ್ಪನಾಯಕ ಮುಂತಾದವರು ಅದ್ವೈತಮತವನ್ನು ಪೋಷಿಸಿಕೊಂಡು ಬರುವಲ್ಲಿಯೂ, ಪ್ರಚುರ ಪಡಿಸುವಲ್ಲಿಯೂ ಮಹತ್ತರವಾದ ಪಾತ್ರವನ್ನು ವಹಿಸಿದ್ದರು. ಧರ್ಮಸಹಿಷ್ಣುಗಳೂ, ಪರಾಕ್ರಮಿಗಳೂ, ನ್ಯಾಯಸಂಧರೂ, ದೈವಭಕ್ತರೂ ಆದ ಇಂತಹ ರಾಜರಿಗಳಿಂದ ಅದ್ವೈತಮತ ಇಂದಿನವರೆಗೂ ಉಳಿದು ಕೊಂಡುಬಂದಿರುವುದು ಅವರುಗಳ ಧರ್ಮ ಸಮನ್ವಯ ಬುದ್ಧಿಯಿಂದ ಎಂದು ಹೇಳಿದರೆ ತಪ್ಪಾಗಲಾರದು.

ಕಾಲ ಉರುಳಿತು. ರಾಜಮನೆತನಗಳು ಬದಲಾದವು. ವಿದೇಶಿಯರ ಆಕ್ರಮಣಗಳಿಂದ ಧರ್ಮ ಕುಂಠಿತವಾಗುವ ಕಾಲ ಬಂದಾಗ ಸನಾತನ ಧರ್ಮರಕ್ಷಣೆಗೆ ತಮ್ಮ ತನು–ಧನ–ಮನಗಳನ್ನೆರೆದು ಅದನ್ನು ರಕ್ಷಿಸಿಕೊಂಡು ಬಂದವರೆಂದರೆ ಮೈಸೂರಿನ ಒಡೆಯರುಗಳು. ಮೈಸೂರಿನ ಒಡೆಯರು ವೇದ ಪಕ್ಷಪಾತಿಗಳಾಗಿದ್ದರು. ವೈದಿಕರ ಏಳಿಗೆಗಾಗಿ ಅನೇಕ ದಾನಗಳನ್ನು ನೀಡಿದ ಇವರ ಕಾಲದಲ್ಲಿ ಅದ್ವೈತ. ದ್ವೈತ, ವೈಷ್ಣವ ಮತಗಳು ತಮ್ಮ ಪರಾಕಾಷ್ಠೆಯನ್ನು ಮುಟ್ಟಿದವು. ಇಮ್ಮಡಿ ಕೃಷ್ಣರಾಜ ಒಡೆಯರು ಶೃಂಗೇರಿ ಸಂಸ್ಥಾನದ ಚಾರದಲ್ಲಿ ಏನು ಕುಂದುಕೊರತೆಗಳುಂಟಾದರೂ ಅದನ್ನು ಆಕ್ಷಣದಲ್ಲೇ ನಿವಾರಣೆ ಮಾಡುವಂತಹವರಾಗಿದ್ದರು. ಮುಮ್ಮಡಿ ಕೃಷ್ಣ ರಾಜರವರಾದರೋ ಅನೇಕ ಬೆಳ್ಳಿ ಪಾತ್ರೆ, ಚಿನ್ನದ ಒಡವೆಗಳನ್ನು ಮಠಕ್ಕೆ ನೀಡಿ ಉಸ್ತುವಾರಿಗಾಗಿ ಒಬ್ಬ ಅಧಿಕಾರಿಯನ್ನೂ ನೇಮಿಸಿದ್ದರು. ಹಾಗೆಯೇ ದಿವಾನ್ ಪೂರ್ಣಯ್ಯನವರೂ ಮಠದ ಕಾರ್ಯಕ್ಕೆ ಚ್ಯುತಿಯುಂಟಾಗದಂತೆ ನೋಡಿಕೊಂಡರು. ಈ ಕಾಲಕ್ಕೆ ಬಹುಮಟ್ಟಿಗೆ ಪ್ರಚಾರಕ್ಕೆ ಬಂದ ಅದ್ವೈತ ಮಠಕ್ಕೆ ಮೈಸೂರರಸರ ಪ್ರೋತ್ಸಾಹ ಅವಿಸ್ಮರಣೀಯವಾದುದು.

ಅದ್ವೈತಮಠಕ್ಕೆ ಹಿಂದೂ ರಾಜರು ಆಶ್ರಯ ನೀಡಿ ಪ್ರಚಾರಪಡಿಸಿದ್ದು ಹೆಚ್ಚಲ್ಲ; ಆದರೆ ವಿದೇಶೀಯರು, ಮುಸಲ್ಮಾನರು, ಈ ಮಠದ ಬಗೆಗೆ ತಮಗಿದ್ದ ಅಭಿಮಾನವನ್ನು ತೋರಿದ್ದು ಗಮನಾರ್ಹವಾಗಿದೆ. ಬಿಜಾಪುರದ ಸೇನಾಧಿಕಾರಿ ರಣದುಲ್ಲಾಖಾನ್, ಹೈದರಾಬಾದಿನ ನಿಜಾಮ, ಹೈದರಾಲಿಯವರು ಅಂತಹವರಲ್ಲಿ ಮುಖ್ಯರು. ಟಿಪ್ಪು ಸುಲ್ತಾನನು ಶೃಂಗೇರಿಸ್ವಾಮಿಗಳಿಗೆ ಬರೆದ ಪತ್ರ ಅವನ ಮನೋಭಾವನೆಯನ್ನು ಬಿಚ್ಚಿತೋರಿಸುವಂತಹುದಾಗಿದೆ. ಆ ಪತ್ರದ ಒಕ್ಕಣೆ ಹೀಗಿದೆ "......... ನಗರದ ಅಸಫನಿಗೆ ಆಜ್ಞಾಪಿಸಿರುವಂತೆ ಆತನು ಒಪ್ಪಿಸುವ ಇನ್ನೂರು ರಹತಿ ನ ಗ ದ ನ್ನೂ, ಇನ್ನೂರು ರಹತಿ ಬೆಲೆಯ ಧಾನ್ಯವನ್ನು ಶಾರದಾದೇವಿಗೆ ಅರ್ಪಿಸಿ ನಮ್ಮ ದಿಗ್ವಿಜಯಕ್ಕೂ ಶತ್ರುಗಳ ವಿನಾಶಕ್ಕೂ ಪ್ರಾರ್ಥಿಸುವುದು...ನೀವು ಜಗದ್ಗುರುಗಳು, ಲೋಕೋದ್ಧಾರಕರೂ, ಮಾನವ ಕಲ್ಯಾಣಕ್ಕೂ, ನೀವು ಯಾವಾಗಲೂ ತಪಸ್ಸನ್ನು ಆಚರಿಸುತ್ತಿದ್ದೀರಿ. ನಮ್ಮ ಏಳಿಗೆ ಮತ್ತು ಅಭಿವೃದ್ಧಿಗಾಗಿ ಪ್ರಾರ್ಥಿಸಿ. ನಿಮ್ಮಂತಹ ಪವಿತ್ರ ಜೀವಿಗಳು ಯಾವ ನಾಡಿನಲ್ಲಿ ವಾಸಿಸುತ್ತಾರೋ ಆ ನಾಡು ಒಳ್ಳೆಯ ಮಳೆ ಬೆಳೆಗಳಿಂದ ವರ್ಧಿಸುತ್ತದೆ".

ಆಂಗ್ಲರಾದ ಗವರ್ನರ್ ಜನರಲ್ ಬೆಂಟಿಕ್, ಮಾರ್ಕ್‌ಕಬ್ಬನ್ ಮೊದಲಾದವರು ಶೃಂಗೇರಿ ಸಂಸ್ಥಾನವನ್ನು ಕೆಣಕದೆ ಗೌರವವನ್ನು ತೋರಿಸಿಕೊಂಡೇ ಬಂದಿದ್ದರು. ಇನ್ನು ನೆರೆನಾಡಿನ ಮರಾಠೆ ರಾಜರಾದ ಇಮ್ಮಡಿ ಶಿವಾಜಿ, ಪೇಶ್ವೆ ಬಾಜೀರಾಯ, ಬಲ್ಲಾಳ ಪ್ರಧಾನ ಶಂಭು, ಘೋರ್ಪಡೆ ಮುಂತಾದವರು ಅಪಾರವಾದ ಧನ ಗ್ರಾಮಗಳನ್ನು ಮಠಕ್ಕೆ ದಾನಮಾಡಿದರು. ಬಾಜೀರಾಯನಂತೂ ತಾನು ಶೃಂಗೇರಿ ಗುರುಗಳ ಶಿಷ್ಯನೆಂದು ಹೇಳಿಕೊಳ್ಳುತ್ತಿದ್ದನಂತೆ!

ಹೀಗೆ ಅನೇಕ ಏಳು–ಬೀಳುಗಳನ್ನು ಕಂಡರೂ ತನ್ನ ಅಂತಸ್ಸತ್ವದಿಂದಲೂ, ರಾಜಾಶ್ರಯದ ಪ್ರಬಲ ರಕ್ಷಣೆಯಿದ್ದುದರಿಂದಲೂ ಇಂದಿಗೂ ಕ್ಷತವಾಗದೆ ಅದ್ವೈತಮಠ ಉಳಿದು ಕೊಂಡು ಬಂದಿದೆಯೆಂದು ನಿಸ್ಸಂಶಯವಾಗಿ ಹೇಳಬಹುದು.

—

ಯುವವಾಣಿ

# ಆದರ್ಶ ಗುರು ಶಿಷ್ಯರು

"ಆರ್ತೋ ಜಿಜ್ಞಾಸುರರ್ಥಾರ್ಥೀ ಜ್ಞಾನೀ ಚ ಭರತರ್ಷಭ ಚತುರ್ವಿಧಾ ಭಜಂತೇ ಮಾಂ" ಎಂದು ಗೀತಾಚಾರ್ಯನಾದ ಕೃಷ್ಣನ ಶ್ರೀಸೂಕ್ತಿ. ಇದರ ಅಭಿಪ್ರಾಯವೇನೆಂದರೆ ಭಗವಂತನನ್ನಾಶ್ರಯಿಸ ಬರುವವರು ನಾಲ್ಕು ವಿಧವಾದ ಚೇತನರು. ಆರ್ತಿಯಾದವನು ಐಶ್ವರ್ಯವನ್ನೂ ಪ್ರತಿಷ್ಠೆಯನ್ನೂ ಕಳೆದುಕೊಂಡು, ಅದನ್ನು ಪುನಃ ಪಡೆಯಲೆತ್ನಿಸುವವನು. ಜಿಜ್ಞಾಸುವು, ಕೇವಲ ಭಕ್ತಿಯಿಂದಲ್ಲದಿದ್ದರೂ, ಪರಮಾತ್ಮ ತತ್ತ್ವವೆಂದರೇನು ಎಂದು ವಿಚಾರಶೀಲನಾಗಿ ಅದನ್ನು ತಿಳಿಯಲೆತ್ನಿಸುವವನು. ಅರ್ಥಾರ್ಥಿಯೂ ಆರ್ತನ ಸ್ವಭಾವದವನೆಂದೇ ಹೇಳಬಹುದು. ಇವನು ಐಶ್ವರ್ಯಕಾಮನು. ಜ್ಞಾನಿಯು "ಜ್ಞಾನಾನ್ಮೋಕ್ಷಃ" ಎಂಬ ಅಂಶವನ್ನು ತಿಳಿದವನಾಗಿ ಜ್ಞಾನದಾಹವುಳ್ಳವನು. ಈ ನಾಲ್ಕು ಪಂಗಡದವರಲ್ಲಿ ಆರ್ತನೂ ಅರ್ಥಾರ್ಥಿಯೂ ನೇರವಾಗಿ ಭಗವಂತನಲ್ಲಿ ಪ್ರಾರ್ಥನೆ ಸಲ್ಲಿಸಬಹುದು. ಅವರಿಗಾರ ನೆರವೂ ಬೇಕಾಗುವುದಿಲ್ಲ. ಆದರೆ ಜಿಜ್ಞಾಸುವೂ, ಜ್ಞಾನಿಯೂ ಈಶ್ವರ ತತ್ತ್ವಾನ್ವೇಷಿಗಳಾದುದರಿಂದ ಅಂತಹ ತತ್ತ್ವವನ್ನು ಚೆನ್ನಾಗಿ ಅರಿತು, ಮನಸ್ಸಿಗೆ ಹಿಡಿಯುವಂತೆ ಉಪದೇಶಿಸುವಂತಹ ಆಚಾರ್ಯರನ್ನು ಆಶ್ರಯಿಸಿ ತತ್ತ್ವವನ್ನು ತಿಳಿದುಕೊಂಡು ಫಲಪ್ರಾಪ್ತಿಯಿಂದ ತೃಪ್ತರಾಗುವವರು.

ಗುರುಶಿಷ್ಯರ ಸ್ಪಷ್ಟಸಂಬಂಧವನ್ನು ತಿಳಿಯಬೇಕಾದರೆ ನಾವು ವೇದಗಳ ಜ್ಞಾನಕಾಂಡವೆಂದು ಪ್ರಸಿದ್ಧವಾದ ಉಪನಿಷತ್ತುಗಳನ್ನು ತಿಳಿದುಕೊಳ್ಳಬೇಕು. "ಉಪನಿಷತ್" ಎಂದು ಪದದ ಅರ್ಥವನ್ನು ಪರಿಶೀಲಿಸಿದರೆ, ಅದು "ಉಪ" ಮತ್ತು "ನಿ" ಎಂಬ ಎರಡು ಉಪಸರ್ಗಗಳಿಂದ ಕೂಡಿದ ಶಬ್ದಕ್ಕೆ 'ಕ್ವಿಪ್" ಪ್ರತ್ಯಯವು ಸೇರಿ "ಸತ್"ಎಂಬ ಧಾತುವಿನ ಪೂರ್ಣರೂಪ ಪಡೆದ "ಉಪನಿಷತ್" ಎಂಬ ಪದವಾಗಿದೆ ಎಂಬುದು ಸ್ಪಷ್ಟವಾಗುತ್ತದೆ. ಅದರ ಅರ್ಥ 'ಉಪ ಎಂದರೆ ಹತ್ತಿರದಲ್ಲಿ 'ನಿ' ಕೆಳಗೆ 'ಷದ್' ಕುಳಿತು ತಿಳಿಯಬಹುದಾದ ವಿದ್ಯೆ. ಅರ್ಥಾತ್ ಗುರುವಿನ ಪಾದದಡಿಯಲ್ಲಿ ನಮ್ರನಾಗಿ ಕುಳಿತು ಬ್ರಹ್ಮವಸ್ತುವಿನ ಜ್ಞಾನವನ್ನು ಪ್ರಶ್ನೆ, ಪರಿಪ್ರಶ್ನೆಗಳ ಮೂಲಕ ಶಿಷ್ಯನಾದವನು ಪರಿಗ್ರಹಿಸುವ ವಿದ್ಯೆ "ಉಪನಿಷತ್" ಎಂಬುದು. ಅನಾದಿಕಾಲದಿಂದ ಕರ್ಮಪಾಶಬದ್ಧನಾಗಿ ಭವಸಾಗರದಲ್ಲಿ ಬಿದ್ದು, ಆ ಕರ್ಮಫಲಗಳನ್ನೇ ಅನುಭವಿಸುತ್ತಿರುವ ಜೀವನು, ಸಂಸ್ಕಾರ ಬಲದಿಂದಲೂ, ಭಗವಂತನ ನಿರ್ಹೇತುಕ ಕೃಪೆಯಿಂದಲೂ, ಭಗವತ್‌ಜ್ಞಾನವನ್ನು ಪಡೆಯಲು ಕಾತರನಾಗಿ, ಆಚಾರ್ಯ ಸಮಾಶ್ರಯಣವನ್ನು ಹೊಂದಿ, ಪ್ರಕೃತಿಗೂ, ಜೀವನಿಗೂ, ಪರಮಾತ್ಮನಿಗೂ ಇರುವ ಸಂಬಂಧಜ್ಞಾನವನ್ನು ತಿಳಿದುಕೊಂಡು ಮೋಕ್ಷವನ್ನು ಹೊಂದುತ್ತಾನೆ. ಅಂತಹ ಬ್ರಹ್ಮವಿದ್ಯಾನಿಷ್ಠರಾದ ಅನೇಕ ಗುರುಶಿಷ್ಯರ ಚರಿತ್ರೆಗಳೂ, ಮತ್ತೆ ಬೇರೆ ವಿದ್ಯೆಗಳನ್ನಧಿಕರಿಸಿದ ಶಿಷ್ಯ ಮತ್ತು ಗುರುಗಳ ಚರಿತ್ರೆಗಳೂ, ವೇದಾಂತದಲ್ಲೂ, ಇತಿಹಾಸ ಶ್ರೇಷ್ಠಗಳಾದ ರಾಮಾಯಣ, ಮಹಾಭಾರತಗಳಲ್ಲೂ ಮತ್ತೆ ಪುರಾಣಗಳಲ್ಲೂ ಬಹುವಾಗಿ ಕಂಡುಬರುತ್ತವೆ. ಅಂತಹ ಕೆಲವು ಆದರ್ಶ ಗುರುಶಿಷ್ಯರ ಚರಿತ್ರೆಯನ್ನು ಇಲ್ಲಿ ಸಂಗ್ರಹಿಸಿ ಕೊಡಲಾಗಿದೆ.

ಪ್ರಶ್ನೋಪನಿಷತ್ತಿನಲ್ಲಿ ಬರುವ ಚರಿತ್ರೆ ಇದು. ಹೆಸರೇ ಸೂಚಿಸುವಂತೆ, ಈ ಉಪನಿಷತ್ತಿನಲ್ಲಿ ಆರು ಜನ ಬ್ರಹ್ಮತತ್ತ್ವಾಕಾಂಕ್ಷಿಗಳಾದ ಶಿಷ್ಯರು, ಬ್ರಹ್ಮಜ್ಞಾನಿಗಳಾದ ಆಚಾರ್ಯರಲ್ಲಿಗೆ ಹೋಗಿ ಬ್ರಹ್ಮ ತತ್ತ್ವವೇನೆಂಬುದನ್ನು ಅರಿಯುವ ಚರಿತ್ರೆ. ಜಿಜ್ಞಾಸುಗಳಾಗಿಯೂ, ಜ್ಞಾನದಾಹಿಗಳಾಗಿಯೂ ಇದ್ದ ಸುಕೇಶ, ಸತ್ಯಕಾಮ, ಸೌರ್ಯಾಯಣಿ, ಆಶ್ವಲಾಯನ, ಭಾರ್ಗವಿ ಮತ್ತು 'ಕಬಂಧಿ' ಎಂಬ ಆರು ಶಿಷ್ಯರು, ಬ್ರಹ್ಮವಿತ್ತುಗಳಾದ ಶ್ರೀ ಪಿಪ್ಪಲಾದ ಮಹರ್ಷಿಗಳಲ್ಲಿ ಬ್ರಹ್ಮವಿದ್ಯೆ ಗ್ರಹಿಸುವ ಸಲುವಾಗಿ 'ಸಮಿತ್ಪಾಣಿ'ಗಳಾಗಿ ಬಂದರು. ಅದನ್ನು ಉಪನಿಷತ್ತಿನಲ್ಲಿ 'ಬ್ರಹ್ಮಪರಾಃ, ಬ್ರಹ್ಮನಿಷ್ಠಾ, ಬ್ರಹ್ಮಾನ್ವೇಷಣಪರಾಃ ಸಮಿತ್ಪಾಣಯಃ ಭಗವಂತಂ ಪಿಪ್ಪಲಾದಮುಪಪನ್ನಾಃ" ಎಂದಿದೆ. ಶಿಷ್ಯರಾಗಿ ಬಂದವರು ಮೊದಲೇ ಭಗವಂತನನ್ನು ತಿಳಿದುಕೊಂಡಿದ್ದವರು. ಶ್ರದ್ಧಾವಂತರಾಗಿ ಬ್ರಹ್ಮವಿದ್ಯೆಯನ್ನು ಪೂರ್ಣವಾಗಿ ಕಲಿಯಲು ಆಚಾರ್ಯರನ್ನಾಶ್ರಯಿಸ ಬಂದವರು. ಆಚಾರ್ಯರುಗಳು ಸುಲಭದಲ್ಲಿ ಆ ವಿದ್ಯೆಯನ್ನು ಎಲ್ಲರಿಗೂ ತಿಳಿಸುತ್ತಿರಲಿಲ್ಲ, ಉಪದೇಶಿಸುತ್ತಿರಲಿಲ್ಲ. ಮೊದಲು ಶಿಷ್ಯನ ಶ್ರದ್ಧಾ ಭಕ್ತಿ ಮೇಧಾಶಕ್ತಿಗಳನ್ನು ಪರೀಕ್ಷಿಸಿ, ಯೋಗ್ಯರೆಂದು ತಿಳಿದವರಿಗೆ ವಿದ್ಯೆಯನ್ನು ಹೇಳಿಕೊಡುತ್ತಿದ್ದರು. ಎಲ್ಲರಿಗೂ ಹೇಳಿದರೆ ಅನೇಕ ವೇಳೆ ವಿದ್ಯೆಯು ಅಪಾತ್ರರಲ್ಲಿ ಸೇರಿ ವಿದ್ಯಾನಾಶ ಆಗಬಹುದೆಂದೇ ಅನೇಕ ಪರೀಕ್ಷೆಗಳಿಂದ ಶಿಷ್ಯ ಶೋಧ ಮಾಡುತ್ತಿದ್ದರು. ಹಾಗೆ ಪರೀಕ್ಷಿಸಿ ಯೋಗ್ಯರೆಂದು ತಿಳಿದು ಈಶ್ವರತತ್ತ್ವ ನಿರೂಪಣೆ ಮಾಡುತ್ತಿದ್ದರೆಂಬ ಅಂಶ ಈ ಉಪನಿಷತ್ತಿನಲ್ಲಿ ವ್ಯಕ್ತವಾಗಿದೆ.

ತಮ್ಮ ಬಳಿಗೆ ಬಂದ ಶಿಷ್ಯರನ್ನು ಕುರಿತು ಶ್ರೀ ಪಿಪ್ಪಲಾದ ಮಹರ್ಷಿಗಳು ಅಪ್ಪಣೆಮಾಡಿದರು "ತಪಸಾ, ಬ್ರಹ್ಮಚರ್ಯೇ ಶ್ರದ್ಧಯಾ ಸಂವತ್ಸರಂ ಸಂವತ್ಸ್ಯ" ಎಂದು. ಅಂದರೆ ತಪಸ್ಸಿನಿಂದಲೂ, ತೀವ್ರ ಬ್ರಹ್ಮಚರ್ಯ ವ್ರತವೆಂದು ಪರಿಗಣಿಸಲ್ಪಡುವ 'ಯೋಷಿತ್ಸ್ಮರಣ, ಕೀರ್ತನ, ಕೇಳಿ, ಪ್ರೇಕ್ಷಣ, ಗುಹ್ಯಭಾಷಣ ಸಂಕಲ್ಪಾಧ್ಯವಸಾಯ ಕ್ರಿಯಾ ನಿವೃತ್ತಿ ಲಕ್ಷಣ ಅಷ್ಟವಿಧ ಮೈಥುನಗಳ ವರ್ಜ್ಯದಿಂದ, ಅಂದರೆ ಹೆಂಗಸರ ಸ್ಮರಣೆ, ಅವರ ಸ್ತುತಿ, ಅವರಲ್ಲಿ ಆಸಕ್ತಿ, ಅವರನ್ನು ಕಾಣುವುದು, ಅವರೊಡನೆ ರಹಸ್ಯ ಸಂಭಾಷಣೆ, ಸಂಕಲ್ಪ, ಅಧ್ಯವಸಾಯ ಕ್ರಿಯಾ ಇವುಗಳ ನಿವೃತ್ತಿ ಪೂರ್ವವಾದ ಬ್ರಹ್ಮಚರ್ಯಯನ್ನು ಶ್ರದ್ಧೆಯಿಂದ ಪಾಲಿಸಿಕೊಂಡು ಒಂದು ವರುಷ ಕಳೆದ ಮೇಲೆಯೇ ಬನ್ನಿ ಎಂದು. ಅನಂತರ ಅವರು ಯೋಗ್ಯರೆಂದು ತಿಳಿದು ತೃಪ್ತರಾಗಿ ಬ್ರಹ್ಮವಿದ್ಯೆಯನ್ನು ಕಲಿಸಿದರು ಗುರುಗಳು. ಶಿಷ್ಯರೂ ಬ್ರಹ್ಮವಿದ್ಯಾ ಪರಿಣತರಾದರು.

ಇನ್ನೊಂದು ಬಹು ಪ್ರಸಿದ್ಧವಾದ ಉಪನಿಷತ್ತು 'ಕಠೋಪನಿಷತ್' ಎಂಬುದು. ಈ ಉಪನಿಷತ್ತು ಕೃಷ್ಣ ಯಜುರ್ವೇದದ ಕಠಶಾಖೆಗೆ ಸೇರಿದುದು. ಮೂರುವಲ್ಲಿಗಳೆಂಬ ಭಾಗಗಳುಳ್ಳ ಎರಡು ಅಧ್ಯಾಯಗಳು ಈ ಉಪನಿಷತ್ತಿನಲ್ಲಿದೆ. ವಾಜಸ್ರವರೆಂಬುವರ ಮಗ ನಚಿಕೇತ ಮತ್ತು ಮೃತ್ಯುದೇವತೆಯಾದ ಯಮ ಇವರ ಸಂಭಾಷಣೆಯೇ ಈ ಉಪನಿಷತ್ತಿನ ಸಾರ. ಇಲ್ಲಿ ಯಮನನ್ನು ಗುರುವಾಗಿಯೂ, ನಚಿಕೇತನನ್ನು ಶಿಷ್ಯನನ್ನಾಗಿಯೂ ಪರಿಗಣಿಸಬಹುದು. ಏಕೆಂದರೆ ಇದರಲ್ಲಿ ಮೃತ್ಯುವಿನಿಂದಾಚೆಗೆ ಆತ್ಮನ ಗತಿ ಏನಾಗುವುದು? ಮಾನವನ ಹುಟ್ಟಿನ ರಹಸ್ಯವೇನು? ಇಂದ್ರಿಯ ನಿಗ್ರಹ ಎಂದರೇನು? ಅಮರತ್ವ ಎಂದರೇನು? ಎಂಬಿವೇ ಮೊದಲಾದ ಆತ್ಮ ವಿಚಾರ, ಗಹನವಾಗಿ ಚರ್ಚಿಸಲ್ಪಟ್ಟಿದೆ. ನಚಿಕೇತನು ವಿಚಾರವನ್ನು ತಿಳಿಯುವ ಆಕಾಂಕ್ಷೆಯಿಂದ ಪ್ರಶ್ನಿ

ಶ್ರೀ ವಿ. ಎಸ್.
ರಾಮಾನುಜಾಚಾರ್ಯ

ಸುತ್ತಾನೆ. ಯಮನು ಉತ್ತರಿಸುತ್ತಾನೆ. ಆದರೆ ಮರಣಾನಂತರ ಆತ್ಮನ ಗತಿ ಏನಾಗುತ್ತದೆ ಎಂಬ ವಿಷಯದಲ್ಲಿ ಪ್ರಶ್ನಿಸಿದಾಗ ಯಮನು "ವಿಷಯಾಂತರಾಸಕ್ತ ಚೇತಸಾ ಏತಾದೃಶ ಮುಕ್ತಾತ್ಮತತ್ತ್ವಂ ನೋಪದೇಶಾರ್ಹಂ" ಎಂದು ಬೇರೆ ವಿಷಯಾಂತರಾಸಕ್ತರಿಗೆ ಆತ್ಮೋಪದೇಶ ಸಲ್ಲದೆಂದು ಯೋಚಿಸಿ, ನಚಿಕೇತನನ್ನು ಈ ವಿಷಯದಿಂದ ದೂರಮಾಡಲು, ಅವನನ್ನು ಬಹುವಿಧದಲ್ಲಿ ಪ್ರಲೋಭಿಸುತ್ತಾನೆ. "ಶತಾಯುಷಂ ಪುತ್ರ ಪೌತ್ರಾನ್ ವೃಣೀಷ್ವ ಬಹೂನ್ ಪಶೂನ್ ಹಸ್ತಿ ಹಿರಣ್ಯ ಮಶ್ವಾನ್ ಭೂಮೇರ್ಮಹದಾಯತನಂ ವೃಣೀಷ್ವ, ಸ್ವಯಂಚ ಜೀವಶರದೋ ಯಾವದಿಚ್ಛಸಿ, ಯೇಯೇ ಕಾಮಾಃ ದುರ್ಲಭೋ ಮರ್ತ್ಯಲೋಕೇ ಸರ್ವಾನ್ಛಂದತಃ ಪ್ರಾರ್ಥಯಸ್ವ' ಎನ್ನುತ್ತಾನೆ ಯಮ. ಎಂದರೆ ದೀರ್ಘಾಯುಸ್ಸು, ಮಕ್ಕಳು, ಮೊಮ್ಮಕ್ಕಳು, ಬಹು ಪಶುಗಳು, ಆನೆಗಳು, ಹೇರಳ ಧನ, ಕುದುರೆಗಳು, ಭೂಮಿಯಲ್ಲಿ ಮಹತ್ತಾದ ಅರಮನೆ, ಮತ್ತು ಭೂಲೋಕದಲ್ಲಿ ಯಾವ್ರ ಯಾವುವು ಹೊಂದಲು ಅಸಾಧ್ಯವಾಗಿರುವುವೋ ಅವೆಲ್ಲವನ್ನೂ ಕೇಳಿಕೋ. ತಕ್ಷಣ ಕೊಡುತ್ತೇನೆ. ಈ ಪ್ರಶ್ನೆ ವಿಷಯ ನಿನಗೆ ಬೇಡ ಎಂದು ಅನೇಕ ವಿಧವಾಗಿ ಅವನ ಮನಸ್ಸಿಗೆ ಕ್ಷೋಭೆಯನ್ನುಂಟುಮಾಡಿ ಪ್ರಲೋಭನೆಗೆ ಪ್ರಯತ್ನಿಸುತ್ತಾನೆ. ಇವಾವುದಕ್ಕೂ ಒಳಗಾಗದೇ ನಚಿಕೇತನು ಇವಾವುದನ್ನೂ ಆಶಿಸದೇ, ಮರಣಾನಂತರ ಆತ್ಮಸ್ಥಿತಿ ಏನೆಂಬುದನ್ನೇ ತಿಳಿಯಲು ಒತ್ತಾಯಿಸುತ್ತಾನೆ. ಯಮನು ನಚಿಕೇತನ ಶ್ರದ್ಧೆ, ಧೈರ್ಯ ಮತ್ತು ಆತ್ಮವಿಚಾರ ತಿಳಿಯುವ ಅತಿ ಆಕಾಂಕ್ಷೆಗಳಿಗೆ ಮೆಚ್ಚಿ, ಇವನು ಯೋಗ್ಯನಾದವನೆಂದು ತಿಳಿದು ಮುಕ್ತಾತ್ಮ ತತ್ತ್ವವನ್ನು ಉಪದೇಶಿಸುತ್ತಾನೆ.

ಉಪನಿಷತ್ತುಗಳಲ್ಲೆಲ್ಲಾ 'ಛಾಂದೋಗ್ಯೋಪನಿಷತ್' ದೊಡ್ಡದು ಮತ್ತು ಮಹತ್ವಪೂರ್ಣವಾದದ್ದು. ಈ ಉಪನಿಷತ್ತಿನಲ್ಲಿ ನಾಲ್ಕನೆಯ ಅಧ್ಯಾಯದಲ್ಲಿ ಸತ್ಯಕಾಮ ಜಾಬಾಲಿ ಎಂಬುವನ ಚರಿತ್ರೆ ಬರುತ್ತದೆ. ಇವನು ಗೌತಮ ಮಹರ್ಷಿಗಳಲ್ಲಿ ವಿದ್ಯಾಭ್ಯಾಸಮಾಡಲು ಬಂದಾಗ ಇವನ ಗೋತ್ರ ಇತ್ಯಾದಿಗಳನ್ನು ಕೇಳಿದರು. ಆಗ ಸತ್ಯಕಾಮನು ತಮ್ಮ ತಾಯಿಯ ಬಳಿಗೆ ಹೋಗಿ ವಿಚಾರಿಸಿಕೊಂಡು ಹಿಂದಿರುಗಿ ಬಂದು ಗೌತಮ ಮಹರ್ಷಿಗಳಲ್ಲಿ ತಾನು ಜಾಬಾಲಿ ಎಂಬುವಳ ಮಗನೆಂದೂ ತನ್ನ ಹೆಸರು ಸತ್ಯಕಾಮನೆಂದೂ ಗೋತ್ರ ಇತ್ಯಾದಿಗಳು ತಿಳಿಯದೆಂದೂ ಯಥಾರ್ಥವನ್ನೇ ಧೈರ್ಯವಾಗಿ ಹೇಳುತ್ತಾನೆ. ಈ ಸತ್ಯವಾಕ್ಯವನ್ನು ಕೇಳಿದ ಮಹರ್ಷಿಗಳು ಇವನ ಸತ್ಯನುಡಿಗೆ ಮೆಚ್ಚಿ ಇವನು ಬ್ರಹ್ಮೋಪಾಸನೆಗೆ ಯೋಗ್ಯನೆಂದು ನಿಷ್ಕರ್ಷಿಸಿ ಅವನಿಗೆ ವಿದ್ಯಾಭ್ಯಾಸವನ್ನು ನೀಡಲು ಒಪ್ಪುತ್ತಾರೆ. ಆದರೆ ಅವನಿಗೆ ನಾಲ್ಕುನೂರು ಹಸುಗಳನ್ನು ಕೊಟ್ಟು, ಅವುಗಳನ್ನು ಮೇಯಿಸಿಕೊಂಡು ಬರುವಂತೆಯೂ ಅವುಗಳ ಮಂದೆಯಲ್ಲಿ ಒಂದು ಸಾವಿರ ಹಸುಗಳಿಂದ ತಮ್ಮ ಬಳಿಗೆ ಬರಲು ಆಜ್ಞಾಪಿಸಿದರು. ಸತ್ಯಕಾಮನೂ ಹಾಗೆಯೇ ಆಗಲೆಂದು ಗುರುಗಳ ಆಜ್ಞೆಯನ್ನು ಶಿರಸಾವಹಿಸಿ ದನಗಳನ್ನು ಕಾಯುತ್ತಾ ಕಾಯುತ್ತಾ ಕೆಲವು ಕಾಲ ಕಳೆದನು. ಆಮೇಲೊಂದು ದಿನ ಮಂದೆಯಲ್ಲಿದ್ದ ಗೂಳಿಯೊಂದು 'ನಾವು ಈಗ ಸಾವಿರವಾಗಿದ್ದೇವೆ. ನಮ್ಮನ್ನು ಗೌತಮ ಮಹರ್ಷಿಗಳ ಬಳಿಗೆ ಕರೆದುಕೊಂಡು ಹೋಗು' ಎಂದಂತಾಗಿ, ಅದರಿಂದಲೂ, ಅಗ್ನಿಯಿಂದಲೂ, ಒಂದು ಹಂಸದಿಂದಲೂ ಒಂದೊಂದು ಚರಣ

(27 ನೇ ಪುಟ ನೋಡಿ)

## ಶ್ರೀ ಪದ್ಮಾವತೀ ದೇವಾಲಯ



### ಆರ್ಜಿತ ಅಭಿಷೇಕ

ತಿರುಚಾನೂರಿನಲ್ಲಿನ ಶ್ರೀ ಪದ್ಮಾವತೀದೇವಿಯವರಿಗೆ ಪ್ರತಿ ಶುಕ್ರವಾರವೂ ಆರ್ಜಿತ ಅಭಿಷೇಕ ಸೇವೆ ಏರ್ಪಾಟು ಮಾಡಲಾಗಿದೆ. ಟಿಕೆಟ್ಟಿಗೆ ರೂ. 100/- ಸಲ್ಲಿಸಿ ಗೃಹಸ್ಥರು ಭಾಗವಹಿಸಬಹುದು. ಗೃಹಸ್ಥರು, ಅವರ ಸಂಬಂಧೀಕರು ಒಟ್ಟು ಇಬ್ಬರು ಕ್ಷೀರ ಪಾತ್ರೆಗಳನ್ನು ಆಲಯದಲ್ಲಿ ಮೆರವಣಿಗೆಯಲ್ಲಿ ಕೊಂಡು ಹೋಗಲು ಅನುಮತಿಸಲ್ಪಡುವರು. ಅನಂತರ ಅವರು ಅಭಿಷೇಕ ದರ್ಶನ ಮಾಡಬಹುದು. ಆದರೆ ಪ್ರಸಾದಮಾತ್ರ ಕೊಡಲ್ಪಡುವುದಿಲ್ಲ. ಭಕ್ತರು ಈ ಸದವಕಾಶವನ್ನು ಉಪಯೋಗಿಸಿಕೊಳ್ಳಬಹುದು.

# ಸತ್ಯಂ ವದ ಧರ್ಮಂ ಚರ

ಸತ್ಯವನ್ನೇ ಹೇಳು, ಧರ್ಮವನ್ನು ಮಾಡು–ಸತ್ಯಯಾವುದು, ಧರ್ಮಯಾವುದು? ಸತ್ಯ ಹೇಳಿದರೆ ನಮಗಿಂದು ಬದುಕಲು ಸಾಧ್ಯವೇ? ಇದ್ದುದನ್ನು ಇದ್ದಂತೆ, ಕಂಡದ್ದನ್ನು ಕಂಡಂತೆ ಧರ್ಮಮಾರ್ಗದಲ್ಲಿ ಅಹಿಂಸಾವಾದಿಯಾಗಿ ಸತ್ಯವನ್ನೇ ಹೇಳುತ್ತಾ ಹೋದರೆ ನಾವೀ ಪ್ರಪಂಚದಲ್ಲಿ ಬಾಳಿ ಬದುಕಲು ಸಾಧ್ಯವೇ? ಸಂಶಯ ಸಹಜವಾಗಿಯೇ ಮೂಡುತ್ತದೆ. ದಿನನಿತ್ಯ ನಮ್ಮ ಕಣ್ಮುಂದೆ ನಡೆಯುತ್ತಿರುವ ಘಟನೆಗಳೂ ಇದಕ್ಕೆ ಪ್ರೇರಕವಾಗಿವೆ – ಅದರೂ ಏಕೆ ಸಾಧ್ಯವಿಲ್ಲ – ನಾವೇನು ಮನುಷ್ಯರಲ್ಲವೇ? ಮನಸಿದ್ದಲ್ಲಿ ಮಾರ್ಗವಿದೆ. ಸಾಧಿಸಿದರೆ ಸಬಳ ನುಂಗಿಯಾನು. ಪ್ರಚಂಡಬುದ್ಧಿಶಕ್ತಿಯ, ಅಖಂಡ ತೋಳ್ಬಲದ, ಅನಂತಶಕ್ತಿಯ ಆತ್ಮಬಲದ ಮಾನವನಿಂದ ಸಾಧಿಸಲಸಾಧ್ಯವಾದುದೇನುಂಟು? ಮುಖ್ಯ ನಮಗೆ ಶ್ರದ್ಧೆ ಹಾಗೂ ಸ್ಥೈರ್ಯ ಅತ್ಯಗತ್ಯ. ನಾನೇನು ಬೇಕಾದರೂ ಮಾಡಬಲ್ಲೆ, ಸಾಧಿಸಬಲ್ಲೆ ಎಂಬ ಆತ್ಮ ವಿಶ್ವಾಸವನ್ನು ನಾವು ಮೊದಲಾಗಿ ಬೆಳೆಸಿಕೊಳ್ಳ ಬೇಕು–ಆತ್ಮವಿಶ್ವಾಸ ಅಂದರೆ ನಮ್ಮ ಅಂತರಾತ್ಮನ ಮೇಲೆ ನಾವಿಟ್ಟಿರುವ ಭರವಸೆ, ಪ್ರೀತಿ, ತುಂಬು ವಿಶ್ವಾಸ–ಇದು ಯಾವಾಗ ನಮ್ಮಲ್ಲಿ ತುಂಬಿ ತುಳುಕುವುದೋ ಆಗ ನಾವು ಗೆದ್ದಂತೆ. ಸತ್ಯ ಹೇಳಲೂ ನಮಗಾಗ ಭೀತಿಯುಂಟಾಗುವುದಿಲ್ಲ. ಕಾರಣವಿಷ್ಟೆ;

ಸತ್ಯದ ಹಿಂದೆ ಭೂತಾಕಾರದಲ್ಲಿ ಬೆನ್ನಟ್ಟಿಕೊಂಡು ಬರಬಹುದಾದ ಕಷ್ಟ ಪರಂಪರೆಗಳನ್ನು ಎದುರಿಸುವಲ್ಲಿ ನಮ್ಮ ಚಿತ್ತಸ್ಥೈರ್ಯ ಪ್ರಬಲವಾಗಿರುತ್ತದೆ. ಆತ್ಮ ಅವನ್ನು ಎದುರಿಸುವಲ್ಲಿ ಸನ್ನದ್ಧವಾಗಿರುತ್ತದೆ.

ಈ ಸತ್ಯಸಾಕ್ಷಾತ್ಕಾರದ ದಿಟ್ಟ ಹೆಜ್ಜೆಯ ಧೀರೋದಾತ್ತ ನಿಲುವಿನಲ್ಲಿ ಆತ್ಮನನ್ನು ಮುನ್ನಡೆಸುವಲ್ಲಿ ನಮಗೆ ಧರ್ಮವೂ ಸಹಕಾರಿಯಾಗುತ್ತದೆ – ಸತ್ಯದ ನುಡಿ ಧರ್ಮದ ಕೈಯನ್ನು ಬಲಪಡಿಸುತ್ತದೆ. ಧರ್ಮಕಾರ್ಯ ಆತ್ಮನನ್ನು ಸನ್ಮಾರ್ಗದಲ್ಲಿ ಮುನ್ನಡೆಸಿಕೊಂಡು ಹೋಗುವಲ್ಲಿ ಬೆಂಗಾವಲಾಗಿ ನಿಲ್ಲುತ್ತದೆ-

ಸತ್ಯ ಧರ್ಮ–ಜೀವನ ಚೈತನ್ಯರಥದ ಎರಡು ಮುಖಗಳು. ಮಾನವನ ಪ್ರಗತಿ ಅದನ್ನು ಪರಿಪೂರ್ಣವಾಗಿ ಅವಲಂಬಿಸಿದೆ.

ಧರ್ಮವು ಆತ್ಮನ ಪರಮಮಿತ್ರ. ಆತ್ಮ ಹೇಗೆ ಸಾಯುವುದಿಲ್ಲವೋ ಹಾಗೆಯೇ ಧರ್ಮಕ್ಕೆ ಸಾವೆಂಬುದಿಲ್ಲ. ಸತ್ಯದ ಸಂರಕ್ಷಣೆಯಲ್ಲಿ ಧರ್ಮವು ಯಾವಾಗಲೂ ಆತ್ಮನನ್ನು ಹಿಂಬಾಲಿಸಿಕೊಂಡಿದ್ದು ಸದಾ ನಂಬಿಕೊಂಡಿದ್ದವರ ರಕ್ಷಣೆಗೆ ಸಿದ್ಧವಾಗಿರುತ್ತದೆ – ಆತ್ಮಕ್ಕೂ ಧರ್ಮಕ್ಕೂ ಗಳಸ್ಯ ಕಂಠಸ್ಯ – ದುಷ್ಕೃತ್ಯ ಧರ್ಮದ ಮೇಲೆ ಪರಿಣಾಮ ಬೀರಿ ಧರ್ಮಕ್ಕೆ ಗ್ಲಾನಿಯನ್ನುಂಟುಮಾಡುತ್ತದೆ – ಧರ್ಮದ ಗ್ಲಾನಿಯೆಂದರೆ ಆತ್ಮನ ಅವನತಿ ಎಂದರ್ಥ– ಸತ್ಯ, ಅಹಿಂಸೆ, ಸಹನೆ ಮೊದಲಾದುವುಗಳೆಲ್ಲವೂ ಧರ್ಮದ ವಿವಿಧ ಮುಖವಾಡಗಳು – ಅವು ಪರಸ್ಪರ ಯಾವ ಕಾಲಕ್ಕೂ ಒಂದಕ್ಕೊಂದು ಪೂರಕ ಪ್ರೇರಕಗಳು– ನಾವು ಯಾವ ಪೂರ್ವಜನ್ಮದ ಪುಣ್ಯಫಲವೋ ಮಾನವರಾಗಿ ಜನಿಸಿದ್ದೇವೆ. ಮಾನವರಾಗಿ ಹುಟ್ಟಿ ವಿಚಿತ್ರವೂ ವಿಶಾಲವೂ ಆದ ಈ ವಿಶ್ವದಲ್ಲಿ ವಿಶಿಷ್ಟವಾದೊಂದು ಸ್ಥಾನಮಾನವನ್ನು ಪರಮಾತ್ಮನಿಂದ ಅನುಗ್ರಹರೂಪದಲ್ಲಿ ಪಡೆದಿದ್ದೇವೆ. ಬುದ್ಧಿವಂತಿಕೆ ಹಾಗೂ ಪರಸ್ಪರ ತಿಳುವಳಿಕೆ ಈ ಉತ್ತಮವಾದೆರಡು ಗುಣಗಳಿಂದ ನಾವು ಇನ್ನಿತರ ಪ್ರಾಣಿಗಳಿಂದ ಉತ್ಕೃಷ್ಟರೆನಿಸಿದ್ದೇವೆ. ನಮ್ಮನ್ನು ಈ ವಿಶ್ವಕ್ಕೆ ನೂಕಿದ ಪರಮಾತ್ಮ ನಮಗಾಗಿ ಎಲ್ಲವನ್ನೂ ಸೃಷ್ಟಿಸಿ ಕೊಟ್ಟಿದ್ದಾನೆ. ನಮ್ಮ ಉಳಿವು ಹಾಗೂ ಅಳಿವು ನಮ್ಮ ಕೈಯಲ್ಲೇ ಇದೆ. ನೋವು ನಲಿವು ನಮ್ಮ ಕಾಯಕದಲ್ಲಿದೆ–ಅತಃ ನಮ್ಮ ಕಾಯಕ ಉತ್ತಮಗುಣಮಟ್ಟದ್ದಾಗಿರಬೇಕು. ಕಾಯಕದ ಗುಣಮಟ್ಟಗಳನ್ನು ಅನುಸರಿಸಿ ನಮಗೆ ಸುಖದುಃಖಗಳು ಲಭಿಸುತ್ತವೆ–ಸುಖದುಃಖಗಳನ್ನು ಪರಮಾತ್ಮ ಹೆಚ್ಚಾಗಿ ಒಂದೆ ಸಮನಾಗಿ ಹಂಚಿದ್ದಾನೆ.

ಸುಖವನ್ನೇ ಹೆಚ್ಚಾಗಿ ಬಯಸುವುದು ಮಾನವನ ಸಹಜಗುಣ. ತಾನು ಸುಖಿಯಾಗಿ ತನ್ನನ್ನು ನಂಬಿದವರು ಸುಖದಿಂದ ಬಾಳಬೇಕೆಂದಾಶಿಸುವುದರಲ್ಲಿ ಅವನದ್ದೇನೂ ತಪ್ಪಿಲ್ಲ. ಆದರೆ ಸೃಷ್ಟಿಸ್ಥಿತಿ ನಿಯಮದಲ್ಲಿ ಸಮಸ್ತ ಜೀವರಾಶಿಗಳೂ ಒಂದೇ. ಆದರೂ ಅದೇಕೆ ಕೆಲವರು ಶ್ರೀಮಂತರಾಗಿದ್ದಾರೆ? ಹಲವರು ದರಿದ್ರರಾಗಿದ್ದಾರೆ? ಕೆಲವರಿಗೆ ಮೂರುಹೊತ್ತಿನ ಮೊಸರನ್ನದೂಟ ದೊರೆತರೆ ಹಲವರಿಗೆ ಒಪ್ಪೊತ್ತಿನ ತಂಗಳು–

ಕೆಲವರು ಸುಖಪಡಲೆಂದೇ ಈ ಭುವಿಯಲ್ಲಿ ಹುಟ್ಟಿದ್ದರೆ ಹಲವಾರುಮಂದಿ ದುಃಖದ ಜಂಝಾಟದಲ್ಲಿ ಬಿದ್ದು 'ಸಾಕಪ್ಪಾ ಸಾಕು ಈ ಸಂಸಾರ ತಾಪತ್ರಯ, ಎಂಬಷ್ಟರವರೆಗೆ ಬೇಸರತಾಳಿ "ಇನ್ನು ಮನುಷ್ಯನಾಗಿ ಹುಟ್ಟುವುದೇ ಬೇಡ" ಎಂಬ ತುಚ್ಛ ನಿರ್ಧಾರದಲ್ಲಿ ಸಾಯುವ ಪ್ರಯತ್ನ ಮಾಡುತ್ತಾರೆ– ಪರಮಾತ್ಮನೇ ಹುಟ್ಟಿಸಿದ ಈ ಕರ್ಮಭೂಮಿ ಕೆಲವರ ದಿಟ್ಟಿಯಲ್ಲಿ ಸಗ್ಗ ಹಲವರ ದೃಷ್ಟಿಯಲ್ಲಿ ನರಕ. ಏಕೆ ಹೀಗೆ? ಏನಿದರರ್ಥ?

ಪೂರ್ವಜನ್ಮದ ಧರ್ಮಾಧರ್ಮ ಕರ್ಮಫಲಗಳ ಪ್ರತ್ಯಕ್ಷ ಸ್ವರೂಪವೋ! ಈ ಜನ್ಮದಲ್ಲಿ ತಾನೇ ನಡೆಸಿ ಸಿಕ್ಕಿಬಿದ್ದ ಘೋರ ಕುತ್ಸಿತ ಕಾಯಕ ಫಲಸ್ವರೂಪವೋ? ಎರಡೂ ಹೌದೆನ್ನಬಹುದು–ಹುಟ್ಟು ಸಾವುಗಳ ನಡುವೆ ನಡೆಸಿರಬಹುದಾದ ಕಾಯಕಗಳೆಲ್ಲವುಗಳ ಪ್ರತ್ಯಕ್ಷ ಅನುಭವ.

ನಮ್ಮ ಕಾಯಕಗಳು ಉತ್ತಮವಾಗಿದ್ದರೆ ಉತ್ತಮಫಲ. ಅರ್ಥಾತ್ ಜೀವನದುದ್ಧಕ್ಕೂ

ಶ್ರೀ ಪುತ್ತೂರು ವ್ಯಾಸಕೃಷ್ಣ ತಂತ್ರಿ

# ತಿರುಮಲೆ
## ಶ್ರೀ ವೆಂಕಟೇಶ್ವರಸ್ವಾಮಿ ಅರ್ಚನಾ ಯೋಜನೆ

ಭಕ್ತರು ತಮ್ಮ ಇಷ್ಟದೈವವಾದ ಶ್ರೀ ವೆಂಕಟೇಶ್ವರಸ್ವಾಮಿಯನ್ನು ಅರ್ಚಿಸಲು ಅನುಕೂಲವಾಗುವಂತೆ ತಿರುಮಲೆ ತಿರುಪತಿ ದೇವಸ್ಥಾನದವರು ಹೊಸದಾಗಿ ಬಾಲಾಜೀ ಅರ್ಚನಾ ಯೋಜನೆಯನ್ನು ಆರಂಭಿಸಿದ್ದಾರೆ.

### ಈ ಯೋಜನೆಯಲ್ಲಿ ಸದಸ್ಯರಾಗುವುದು ಹೇಗೆ?

ನೀವು ಮಾಡಬೇಕಾಗಿರುವುದೆಂದರೆ ಇಂಡಿಯನ್ ಓವರ್‌ಸೀಸ್ ಬ್ಯಾಂಕ್ ಮೂಲಕ ತಿ. ತಿ. ದೇ. ಗಳಿಗೆ ರೂ 5586-00 ಸಲ್ಲಿಸುವುದು. ಇದರ ಪ್ರತಿಫಲವಾಗಿ ಹತ್ತು ವರ್ಷಗಳ ಕಾಲ ವರ್ಷಕ್ಕೊಮ್ಮೆ ನೀವು ಬಯಸಿದ ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಅರ್ಚನೆ ಮಾಡುವ ಮಹದ್ಭಾಗ್ಯ ನಿಮ್ಮದಾಗುತ್ತದೆ.

ನೀವು ಸಲ್ಲಿಸಿದ ಹಣ ಹತ್ತು ವರ್ಷಗಳಲ್ಲಿ 15000 ರೂ ಗಳಾಗಿ ಶ್ರೀ ವೆಂಕಟೇಶ್ವರಸ್ವಾಮಿಗೆ ಸೇರುವುದು. ಹಾಗಾಗಿ ಶ್ರೀ ವೆಂಕಟೇಶ್ವರ ಸ್ವಾಮಿಗೆ ಈ ಮೊತ್ತವನ್ನು ಅರ್ಪಿಸಿದ ತೃಪ್ತಿಯೂ ನಿಮಗೆ ದೊರೆಯುತ್ತದೆ.

### ಸೌಲಭ್ಯಗಳು :

ಅರ್ಚನೆಯ ದಿನದಂದು ದಾನಿಗಳಿಗೆ ತಿರುಮಲೆಯಲ್ಲಿ ವಸತಿ ಸೌಕರ್ಯ ಕಲ್ಪಿಸಲಾಗುತ್ತದೆ. ದಂಪತಿಗಳು ಅರ್ಚನ ಸೇವೆಯಲ್ಲಿ ಪಾಲುಗೊಳ್ಳಬಹುದು. ಕುಟುಂಬದ ಮೂವರಿಗೆ ಸುಪ್ರಭಾತದರ್ಶನ, ಪ್ರತ್ಯೇಕ ದರ್ಶನವುಂಟು. ಜೊತೆಗೇ ಉತ್ತರೀಯ ಅಥವಾ ಕುಪ್ಪುಸದ ಕಣ, ಪ್ರಸಾದಗಳುಂಟು.

**ಕಾರ್ಯನಿರ್ವಹಣಾಧಿಕಾರಿ**

**ತಿ. ತಿ. ದೇ.**

ಸುಖಸಂತೋಷ ನಲಿವುಗೆಲುವುಗಳು – ನಾವು ನಡೆಸಿದ ಕಾಯಕ, ನಿಕೃಷ್ಟವಾಗಿದ್ದು ಇನ್ನಿತರ ಜೀವರಾಶಿಗಳಿಗೆ ಮಾರಕ ಪ್ರಾಯವಾಗಿದ್ದಲ್ಲಿ ಅದರ ಫಲಸ್ವರೂಪಗಳೇ ದುಃಖ, ಸೋಲು, ನೋವು ವ್ರಣಬಾಧೆಗಳು – ಸತ್ಯಧರ್ಮದ ಕಾಯಕಗಳು ಆರಂಭದಲ್ಲಿ ಕಷ್ಟಫಲವನ್ನಿತ್ತರೂ ಅಂತ್ಯದಲ್ಲಿ ಶಾಶ್ವತ ಸುಖದ ಅಮೃತಫಲವೀಯುತ್ತದೆ. ಅದುವೆ ದೈವ ಸಾಕ್ಷಾತ್ಕಾರ. ಆತ್ಮನ ಅಮೃತತ್ವ.

ನಾವು ಸ್ವತಃ ನಮ್ಮಲ್ಲಿ ಹೇಗೆ ಗುಣಧರ್ಮ ಆಕಾರಗಳನ್ನು ಕಂಡುಕೊಂಡು ನೋವುನಲಿವು ಗುರುತಿಸಲು ಶಕ್ಯವಾಗುತ್ತೀವೆಯೋ ಹಾಗೆಯೇ ನಮ್ಮೆದುರು ಕಾಣುವ ಎಲ್ಲಾ ಜೀವ ಜಂತುಗಳಿಗೂ ಸುಖಕಷ್ಟಗಳ ಅರಿವಿದೆ. ಅದಕ್ಕಾಗಿ ಹೋರಾಡುತ್ತಿವೆ.

ಇದನ್ನು ನಾವು ಗಮನದಲ್ಲಿಟ್ಟುಕೊಂಡು ನಮ್ಮ ಸ್ವಂತಸುಖಕ್ಕಾಗಿ ಪರರಿಗೆ ಹಾನಿ ಮಾಡದೆ ಅವುಗಳೆಲ್ಲವುದರೊಂದಿಗೆ ಶಾಂತಿ ಸಹನೆಗಳ ಸತ್ಯ ಧರ್ಮತತ್ತ್ವಗಳ ಉತ್ತಮ ಮಟ್ಟದ ಮಾನವೀಯಗುಣ ನೀತಿಮಾರ್ಗದಲ್ಲಿ ನಿತ್ಯವೂ ನಡೆಯಬೇಕು. ಅದುವೇ ಧರ್ಮ.

ಆಗ ಸತ್ಯದ ಚೇತನ, ಧರ್ಮದ ಪ್ರಜ್ಞೆ ನಮ್ಮನ್ನು ಅನವರತವೂ ಸುಖಸಂತೃಪ್ತಿ ನೀಡಿ, ಮೋಕ್ಷದತ್ತ ನಮ್ಮ ಆತ್ಮವನ್ನು ಕೊಂಡೊಯ್ಯುವುದರಲ್ಲಿ ಸ್ನೇಹಹಸ್ತ ನೀಡುತ್ತವೆ. ಇಂದು–ನಾಳೆಯ ಯೋಚನೆಗಳನ್ನು ಇಲ್ಲವಾಗಿಸುತ್ತವೆ. ಭಯ–ಕಂಪನ–ಪ್ರಲೋಭನೆಗಳ ಚಿಂತನೆಯಿಲ್ಲದೆ ಆತ್ಮಾನಂದದ ಸುಖವನ್ನು ಅನುಭವಿಸಲು ಯೋಗ್ಯರೆನಿಸುತ್ತೇವೆ.

ಇದನ್ನರಿತೇ ನಮ್ಮ ಪೂರ್ವಜರು ದೇವ ಮಾನವರಂತೆ ತಾವು ಬಾಳಿ, ಇನ್ನಿತರರನ್ನು ಬಾಳಗೊಡಿಸಿ ತಮ್ಮ ಬಾಳ್ವೆಯಲ್ಲಿ ಜ್ಯೋತಿ ಸ್ವರೂಪಗಳಾಗಿ ಅರಳಿನಿಂತ ಆತ್ಮಹಿತ–ಪರ ಹಿತ ಪ್ರತೀಕ "ಸತ್ಯಂವದ ಧರ್ಮಂಚರ" ಮುಕ್ತಿಯ ಸಂದೇಶ ಸಾರಿದರು.

---

ನರವಿಂಧ್ಯದೊಳಗೆನ್ನ
ಹುಲುಗಿಳಿಯ ಮಾಡಿ ಸಲಹುತ್ತ
ಶಿವ ಶಿವಾ ಎಂದೋದಿಸಯ್ಯ
ಭಕ್ತಿಯೆಂಬ ಪಂಜರದೊಳಿಕ್ಕಿ ಸಲಹು
ಕೂಡಲಸಂಗಮದೇವಾ 1

ಉಳ್ಳವರು ಶಿವಾಲಯವ ಮಾಡುವರು
ನಾನೇನ ಮಾಡಲಯ್ಯಾ ಬಡವನು
ಎನ್ನ ಕಾಲೇ ಕಂಬ ದೇಹವೇ ದೇಗುಲ
ಶಿರವೇ ಹೊನ್ನ ಕಳಸವಯ್ಯಾ
ಕೂಡಲಸಂಗಮದೇವಾ ಕೇಳಯ್ಯ
ಸ್ಥಾವರಕ್ಕಳಿವುಂಟು ಜಂಗಮಕ್ಕಿಲ್ಲ 2

ಭಕ್ತಿ ಎಂತಹುದಯ್ಯ ?
ದಾಸಯ್ಯ ಮಾಡಿದಂತಹುದಯ್ಯ



# ಬಸವ ವಚನಾಮೃತ

ಭಕ್ತಿ ಎಂತಹುದಯ್ಯ ?
ಸಿರಿಯಾಳ ಮಾಡಿದಂತಹುದಯ್ಯ
ಭಕ್ತಿ ಎಂತಹುದಯ್ಯಾ ?
ನಮ್ಮ ಸಿಂಧು ಬಲ್ಲಾಳ ಮಾಡಿದಂತಹುದಯ್ಯ
ಭಕ್ತಿ ಎಂತಹುದಯ್ಯ ? ಕೂಡಲಸಂಗಮದೇವ
ನೀ ಬಾಣನ ಬಾಗಿಲ ಕಾಯ್ದಂತಹುದಯ್ಯ 3

ಭಕ್ತಿಯೆಂಬುದ ಮಾಡಬಾರದು
ಗರಗಸದಂತೆ ಹೋಗುತ್ತ ಕುಯ್ವುದು
ಬರುತ್ತ ಕುಯ್ವುದು
ಘನಸರ್ಪನಲ್ಲಿ ಕೈದುಡುಕಿದರೆ
ಹಿಡಿವುದು ಮಾಂಬುದೇ?
ಕೂಡಲಸಂಗಮದೇವಾ 4

ಎನಿಸುಕಾಲ ಕಲ್ಲು ನೀರೊಳಗಿದ್ದರೇನು
ನೆನೆದು ಮೃದುವಾಗಬಲ್ಲುದೆ?
ಎನಿಸುಕಾಲ ನಿಮ್ಮ ಪೂಜಿಸಿ ಏವೆನಯ್ಯ
ಮನದಲ್ಲಿ ದೃಢವಿಲ್ಲದನ್ನಕ್ಕ
ನಿಧಾನವ ಕಾಯ್ದಿರ್ದ ಬೆಂತರನಂತೆ
ಅದರ ವಿಧಿಯೆನಗಾಯಿತ್ತು
ಕೂಡಲಸಂಗಮದೇವಾ 5

ಕುಂಬಳಕಾಯಿಗೆ ಕಬ್ಬುನದ ಕಟ್ಟು ಕೊಟ್ಟರೆ
ಕೊಳೆವುದಲ್ಲದೆ ಬಲುಹಾಗಬಲ್ಲುದೆ
ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ
ಭಕ್ತಿಯೆಂತಹುದೊ?–ಮುನ್ನಿನಂತೆ!
ಕೂಡಲಸಂಗಯ್ಯಾ ಮನಹೀನನ ಮೀಸಲ ಕಾಯ್ದಿರಿಸಿದಂತೆ 6

ಎಡದ ಪಾದದಲೊದೆದರೆ ಬಲದ ಪಾದವ ಹಿಡಿವೆ
ಬಲದ ಪಾದದಲೊದೆದರೆ ಎಡದ ಪಾದವ ಹಿಡಿವೆ
ತ್ರಾಹಿ ತ್ರಾಹಿ ತಪ್ಪೆನ್ನದು, ಕ್ಷಮೆ ನಿನ್ನದು
ಕೂಡಲಸಂಗಮದೇವಾ, ನಿಮ್ಮ ಕರುಣದ ಕಂದ ನಾನು 7

ಒಡೆಯರುಳ್ಳ ಆಳಿಂಗೆ ಕೇಡಿಲ್ಲ ಕಾಣ ಭೋ!
ಊರೆನ್ನದೆ ಅಡವಿಯೆನ್ನದೆ ಆಳನರಸಿ ಬಹ ಆಳಿದರುಂಟೆ?
ಜೋಳವಾಳಿಂಗೆ ಬಿಜ್ಜಳಂಗೆ ಆಳಾದರೇನು ?
ವೇಳೆವಾಳಿಂಗೆ ಕೂಡಿಕೊಂಡಿಪ್ಪ ನಮ್ಮ ಕೂಡಲಸಂಗಮದೇವ 8

ಎನ್ನಿಂದ ಕಿರಿಯರಿಲ್ಲ
ಶಿವಭಕ್ತರಿಂದ ಹಿರಿಯರಿಲ್ಲ
ನಿಮ್ಮ ಪಾದಸಾಕ್ಷಿ ಎನ್ನ ಮನಸಾಕ್ಷಿ
ಕೂಡಲಸಂಗಮದೇವಾ ಎನಗಿದೇ ದಿಬ್ಯ 9

ಆವನಾದರೇನು?
ಶ್ರೀಮಹಾದೇವನ ನೆನೆವವನ
ಬಾಯ ತಂಬುಲ ಮೆಲುವೆ
ಬೀಳಡುಗೆಯ ಹೊದೆವೆ

ಪಾದರಕ್ಷೆಯ ಕಾಯ್ದು ಬದುಕುವೆ
ಕೂಡಲಸಂಗಮದೇವಾ 10

ದೇವನೊಲಿದನೆಂದು ಮುಯ್ಯಾನಲು ಬೇಡ
ಅಳಿಸುವ ನಗಿಸುವನೊಲಿದನೆ
ತರಕಟ ಕಾಡುವನೊಲಿದನೆ
ಬೆಚ್ಚದೆ ಬೆದರದೆ ತೊತ್ತುತನವ ಮಾಡಲು
ತನ್ನಂತೆ ಮಾಡುವ ಕೂಡಲಸಂಗಮದೇವ 11

ಕಾಮವೇಕೊ ಲಿಂಗಪ್ರೇಮಿಯೆನಿಸುವಂಗೆ
ಕ್ರೋಧವೇಕೊ ಶರಣ ವೇದ್ಯನೆನಿಸುವಂಗೆ
ಲೋಭವೇಕೊ ಭಕ್ತಿಲಾಭವ ಬಯಸುವಂಗೆ
ಮೋಹವೇಕೋ ಪ್ರಸಾದ ವೇದ್ಯನೆನಿಸುವಂಗೆ
ಮದಮತ್ಸರವುಳ್ಳವಂಗೆ ಹೃದಯಶುದ್ಧವೆಲ್ಲಿಯದೊ
ಹದುಳಿಗರಾದಲ್ಲಿಪ್ಪ ನಮ್ಮ ಕೂಡಲಸಂಗಮದೇವ 12

ನಾನು ಆರಂಬವ ಮಾಡುವೆನಯ್ಯಾ
ಗುರುಪೂಜೆಗೆಂದು
ನಾನು ಬೆವಹಾರವ ಮಾಡುವೆನಯ್ಯಾ
ಲಿಂಗಾರ್ಚನೆಗೆಂದು
ನಾನು ಪರಸೇವೆಯ ಮಾಡುವೆನಯ್ಯಾ
ಜಂಗಮದಾಸೋಹಕ್ಕೆಂದು
ನಾನಾವಾವ ಕರ್ಮಂಗಳ ಮಾಡಿದರೆಯೂ
ಆ ಕರ್ಮ ಫಲಭೋಗವ
ನೀ ಕೊಡುವೆಯೆಂಬುದ ನಾನು ಬಲ್ಲೆನು
ನೀ ಕೊಟ್ಟ ದ್ರವ್ಯವ ನಿಮಗಲ್ಲದೆ
ಮತ್ತೊಂದು ಕ್ರೀಯ ಮಾಡೆನು
ನಿಮ್ಮ ಸೊಮ್ಮಿಂಗೆ ಸಲಿಸವೆನು
ನಿಮ್ಮಾಣೆ ಕೂಡಲಸಂಗಮದೇವಾ 13

ಆಡಿದರೇನೊ ಹಾಡಿದರೇನೊ ಓದಿದರೇನೊ
ತ್ರಿವಿಧ ದಾಸೋಹವಿಲ್ಲದನ್ನಕ್ಕ
ಆಡದೇ ನವಿಲು? ಹಾಡದೇ ತಂತಿ? ಓದದೇ ಗಿಳಿ?
ಭಕ್ತಿಯಿಲ್ಲದವರನೊಲ್ಲ ಕೂಡಲಸಂಗಮದೇವ 14

ಹಾವು ತಿಂದವರ ನುಡಿಸಬಹುದು
ಗರ ಹೊಡೆದವರ ನುಡಿಸಬಹುದು
ಸಿರಿಗರ ಹೊಡೆದವರ ನುಡಿಸಲು ಬಾರದು ನೋಡಯ್ಯಾ
ಬಡತನವೆಂಬ ಮಂತ್ರವಾದಿ ಹೋಗಲು ಒಡನೆ ನುಡಿವರು
ಕೂಡಲಸಂಗಮದೇವಾ 15

ಹೊರಗೆ ಹೂಸಿ ಏವೆನಯ್ಯ
ಒಳಗೆ ಶುದ್ಧವಾಗದನ್ನಕ್ಕ
ಮಣಿಯ ಕಟ್ಟಿ ಏವೆನಯ್ಯ
ಮನಮುಟ್ಟದನ್ನಕ್ಕ
ನೂರನೋದಿ ಏವೆನಯ್ಯ
ಕೂಡಲಸಂಗಮದೇವರ
ಮನಮುಟ್ಟಿ ನೆನೆಯದನ್ನಕ್ಕ 16

ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ
ಹೊಸ್ತಿಲಲ್ಲಿ ಹುಲ್ಲು ತುಂಬಿ
ಮನೆಯೊಳಗೆ ರಜ ತುಂಬಿ
ಮನೆಯೊಳಗೆ ಮನೆಯೊಡೆಯನಿದ್ದಾನೋ ಇಲ್ಲವೊ
ತನುವಿನೊಳಗೆ ಹುಸಿ ತುಂಬಿ
ಮನದೊಳಗೆ ವಿಷಯ ತುಂಬಿ
ಮನೆಯೊಳಗೆ ಮನೆಯೊಡೆಯನಿಲ್ಲ
ಕೂಡಲಸಂಗಮದೇವಾ 17

ಕಳಬೇಡ ಕೊಲಬೇಡ
ಹುಸಿಯ ನುಡಿಯಲು ಬೇಡ
ಮುನಿಯಬೇಡ
ಅನ್ಯರಿಗೆ ಅಸಹ್ಯ ಪಡಬೇಡ
ತನ್ನ ಬಣ್ಣಿಸಬೇಡ
ಇದಿರ ಹಳಿಯಲು ಬೇಡ
ಇದೇ ಅಂತರಂಗ ಶುದ್ಧಿ
ಇದೇ ಬಹಿರಂಗ ಶುದ್ಧಿ
ಇದೇ ನಮ್ಮ ಕೂಡಲ
ಸಂಗಮದೇವರನೊಲಿಸುವ ಪರಿ 18

ಊರ ಸೀರೆಗೆ ಅಗಸ ತಡೆಬಡಿಹಡೆದಂತೆ
ಹೊನ್ನೆನ್ನದು ಹೆಣ್ಣೆನ್ನದು
ಮಣ್ಣೆನ್ನದೆಂದು ಮರುಳಾದೆ
ನಿಮ್ಮ ನರಿಯದ ಕಾರಣ ಕೆಮ್ಮನೆ ಕೆಟ್ಟೆ
ಕೂಡಲಸಂಗಮದೇವಾ 19

ಗುಬ್ಬಿ ಹೆರರ ಮನೆಯ ತನ್ನ ಮನೆಯೆಂಬಂತೆ
ಧರೆ ಧನ ವನಿತೆಯರು ತನ್ನವರೆಂದು
ಹೋರಿ ಹೋರಿ ಸಾವುತ್ತಿದೆ ಜೀವ
ಸರ್ವ ಕರ್ತೃ ಕೂಡಲಸಂಗಯ್ಯನೊಬ್ಬನೆ
ಎಂದರಿಯದೆ ಕೆಟ್ಟರು 20

—ಬಸವಣ್ಣನವರು



# ಕಿಶೋರ ಜಗತ್

# ಮಹರ್ಷಿ ಅತ್ರಿ

'ರಸಿಕಪುತ್ತಿಗೆ'

ಹಳೆಯ ಕಾಲದ ಮಾತಿದು. ಎಷ್ಟು ಹಳೆಯ ಕಾಲವೆಂದರೆ ನಾವು ಯೋಚಿಸಲೂ ಸಾಧ್ಯವಿಲ್ಲದಷ್ಟು. ಆಗ ಇಂದಿನಂತೆ ಶಾಲಾ ಕಾಲೇಜುಗಳಿದ್ದಿಲ್ಲ. ಪಾಠಶಾಲೆಗಳೂ ಇದ್ದಿಲ್ಲ. ನದೀತೀರದ ಕಾಡುಗಳಲ್ಲಿ ಋಷಿಗಳು ತಮ್ಮ ಆಶ್ರಮ ಕಟ್ಟುತ್ತಿದ್ದರು. ಅವರೂ ಅವರ ವಿದ್ಯಾರ್ಥಿಗಳೂ ಅಲ್ಲೇ ವಾಸಿಸುತ್ತಿದ್ದರು. ಋಷಿಗಳು ವಿದ್ಯಾರ್ಥಿಗಳಿಗೆ ಶಿಕ್ಷಣ ನೀಡುತ್ತಿದ್ದರು. ತಾವೂ ಕಲಿಯುತ್ತಿದ್ದರು. ಸಂಶೋಧನೆ ಮಾಡುತ್ತಿದ್ದರು. ರಾಜರುಗಳು ಅವರ ಸಲಹೆಯಿಂದ ಶಾಸನ ಮಾಡುತ್ತಿದ್ದರು.

ಆಶ್ರಮಗಳು ಬಹಳ ಸುಂದರ. ಋಷಿ ಮುನಿಗಳ ಮಕ್ಕಳಂತೇ ಪಶುಪಕ್ಷಿಗಳೂ ಅಲ್ಲಿ ಓಡಾಡುತ್ತಿದ್ದವು. ಕೆಲವು ಕಡೆ ಹೂವು ಅರಳಿ–ಕೆಲವು ಕಡೆ ಹಣ್ಣು ಮಾಗಿ ಪರಿಮಳಿಸುತ್ತಿದ್ದವು. ಬೆಳ್ಳಿಯ ರಸದಂತೆ ಒಂದೆಡೆ ಸಂಗೀತದ ಧ್ವನಿ ಮಾಡುತ್ತಿತ್ತು.

ಇಂಥ ಒಂದು ಆಶ್ರಮದಲ್ಲಿ ಒಬ್ಬ ಋಷಿ ಇದ್ದ. ಅವನ ಹೆಸರು ಅತ್ರಿ. ಬಹಳ ಜ್ಞಾನಿ. ವೇದಗಳ ಹೆಸರು ಕೇಳಿದ್ದೀರಲ್ಲ? ಪ್ರಪಂಚದಲ್ಲಿ ಸಿಗುವ ಪುಸ್ತಕಗಳಲ್ಲಿ ಅತ್ಯಂತ ಹಳೆಯವು. ಅವುಗಳ ಕೆಲವು ಮಂತ್ರ ಅತ್ರಿಋಷಿಯ ರಚಿತ. ಅವನ ಆಶ್ರಮದಲ್ಲಿ ದೂರ ದೂರದಿಂದ ಬಂದ ವಿದ್ಯಾರ್ಥಿಗಳು ಕಲಿಯುತ್ತಿದ್ದರು.

ಒಂದು ಸಲ ಆ ದೇಶದ ರಾಜ–ಪ್ರಜೆಗಳಲ್ಲಿ ಜಗಳ ಉಂಟಾಯಿತು. ರಾಜ "ಶಾಸನದ ಅಧಿಕಾರ ನನಗೆ ಮಾತ್ರ" ಎನ್ನುತ್ತಿದ್ದ. ಪ್ರಜೆಗಳು– "ನಾವು ನಿನ್ನನ್ನು ರಾಜನನ್ನಾಗಿ ಮಾಡಿದ್ದೇನೋ ನಿಜ. ಆದರೆ ನೀನು ಮನಬಂದಂತೆ ವರ್ತಿಸುವ ಅಧಿಕಾರ ಹೊಂದಿಲ್ಲಾ" ಎಂದರು. ಈ ಜಗಳ ವಿಕೋಪಕ್ಕೇರಿತು. ಕೆಲವರು ರಾಜನ ಪಕ್ಷ; ಕೆಲವರು ಪ್ರಜೆಗಳ ಕಡೆ, ಅತ್ರಿ ಋಷಿ ಪ್ರಜೆಗಳ ಪಕ್ಷ. ಆತನ ಹೇಳಿಕೆ –'ರಾಜ್ಯ ಪ್ರಜೆಗಳದ್ದೇ, ರಾಜ ಕೇವಲ ಪ್ರಜೆಗಳ ಪ್ರತಿನಿಧಿ ಮಾತ್ರ'. ಅಂದರೆ ಪ್ರಜೆಗಳ ಪತಿಯಿಂದ ಆತ ಆಳಬಹುದು.

ಇದನ್ನು ಕೇಳಿದ ರಾಜ ಅಪ್ರಸನ್ನನಾದ. ಅತ್ರಿಋಷಿ ಯಾರಕಡೆ ಇರುವರೋ ಅವರೇ ಗೆಲ್ಲುವರೆಂದು ಆತ ಬಲ್ಲ. ಆದರಿಂದ ರಾಜ ಅತ್ರಿಯನ್ನು ಹಿಡಿಸಿ ಕಾರಾಗೃಹದಲ್ಲಿರಿಸಿದ. ತರತರದ ಯಾತನೆ ಕೊಡತೊಡಗಿದ. ಈ ಪೀಡೆಗಳಿಂದ ಅತ್ರಿ ರೋಗಿಯಾದ. ತೀವ್ರವಾದ ಜ್ವರ ಬಂತು. ಆಗ ಆತನ ಚಿಕಿತ್ಸೆಗೆ ವೈದ್ಯರನ್ನು ಕರೆಸಬೇಕಾಯಿತು. ಆಗ ಇಬ್ಬರು ಅವಳಿ ಜವಳಿ ಸಹೋದರ! ವೈದ್ಯರಿದ್ದರು, ಅವರ ಹೆಸರು ಅಶ್ವಿನೀಕುಮಾರರು. ಅವರೇ ಅತಿ ದೊಡ್ಡ ವೈದ್ಯರು. ಅವರು ಬಂದು ಚಿಕಿತ್ಸೆ ಮಾಡಿದ ನಂತರ ಅತ್ರಿ ಗುಣ ಮುಖನಾದ.

ಹೀಗಿದ್ದ ಅತ್ರಿ ದೊಡ್ಡ ವಿದ್ವಾಂಸ, ಜ್ಞಾನಿ, ಪ್ರಜಾಹಿತ ಮಾಡುವವ. ನಿಜ ವೆಂದರೆ ಅತ್ರಿ ಒಬ್ಬ ವ್ಯಕ್ತಿಯ ಹೆಸರಲ್ಲ. ಎಲ್ಲಕ್ಕಿಂತ ಮೊದಲು ಆಶ್ರಮ ಸ್ಥಾಪಿಸಿದ ಋಷಿಯ ಹೆಸರು ಅತ್ರಿ. ಆನಂತರ ಆ ಆಶ್ರಮದ ಪೀಠವೇರಿದವರೆಲ್ಲರೂ ಅತ್ರಿಯೆನಿಸಿಕೊಂಡರು. ಈ ರೀತಿ ಹಲವಾರು ನೂರಾರು ಅತ್ರಿಗಳಾಗಿ ಹೋದರು. ಆದರೆ ಅವರೆಲ್ಲರೂ ವಿದ್ವಾಂಸರೂ ಜ್ಞಾನಿಗಳೂ ಆಗಿದ್ದರು.

ಶ್ರೀರಾಮಚಂದ್ರ ಚಿತ್ರಕೂಟಕ್ಕೆ ವನವಾಸಕ್ಕೆಂಗಿ ಹೋದಾಗ ಅತ್ರಿ ಮುನಿಯ ಆಶ್ರಮಕ್ಕೂ ಹೋದ. ಆತನ ಮಡದಿಯ ಹೆಸರು ಅನಸೂಯಾ. ಆಗ ಅವರಿಬ್ಬರು ಬಹಳ ಮುದುಕರಾಗಿದ್ದರು. ಕೂದಲೂ ಬೆಳ್ಳಗಾಗಿ ಶರೀರ ಸುಕ್ಕುಗಟ್ಟಿತ್ತು. ಆದರೆ ಇಬ್ಬರೂ ಬಹಳ ಸ್ನೇಹದಿಂದ ಸೀತಾರಾಮ ಲಕ್ಷ್ಮಣರನ್ನು ಸ್ವಾಗತಿಸಿದರು. ಆಶ್ರಮಕ್ಕೆ ಕರೆದುಕೊಂಡುಹೋಗಿ ಕಂದ ಮೂಲಾದಿಗಳನ್ನಿತ್ತು ಸತ್ಕರಿಸಿದರು. ವಿಶೇಷವಾಗಿ ಅನಸೂಯಾದೇವಿ ಸೀತೆಯ ಬಗೆಗೆ ಬಹಳ ಸ್ನೇಹ ಪ್ರಕಟಿಸಿದಳು. ನಾನಾ ಪ್ರಕಾರದ ಉಪದೇಶ ಆಶೀರ್ವಾದಗಳನ್ನಿತ್ತಳು. ಆಕೆ ಸೀತೆಗೆ ಉಪದೇಶ ಕೊಡುತ್ತಾ 'ಆಪತ್ತು ಬಂದಾಗ ಧೈರ್ಯ, ಮಿತ್ರ, ಧರ್ಮ ಹಾಗೂ ನಾರಿಯ ಪರೀಕ್ಷೆಯಾಗುತ್ತದೆ' ಎಂದಳು. ಬೀಳ್ಕೊಡುವಾಗ ಅನೇಕ ಸುಂದರ ವಸ್ತು, ಎಂದಿಗೂ ಬಾಡದ ಹೂಮಾಲೆಗಳ ಉಡುಗೊರೆ ಕೊಟ್ಟಳು. ಅನಸೂಯೆ ಬಹಳ ದೊಡ್ಡ ತಪಸ್ವಿನಿಯಾಗಿದ್ದಳು. ಆಕೆ ತನ್ನ ಬುದ್ಧಿವಂತಿಕೆಯಿಂದ ಆಶ್ರಮದ ಭೂಮಿಯನ್ನು ಬಹಳ ಪರಿಶ್ರಮದಿಂದ ಫಲವತ್ತಾಗಿ ಮಾಡಿದ್ದಳು. ಈಕೆಯ ಬುದ್ಧಿವಂತಿಕೆಯಿಂದಲೇ ಆ ಪ್ರದೇಶದಲ್ಲಿ ಬರಗಾಲ ಬರುತ್ತಿರಲಿಲ್ಲ. ಬೇರೆ ಋಷಿಗಳು ಆಕೆಯನ್ನು ಬಹಳ ಗೌರವಿಸುತ್ತಿದ್ದರು. ಈಕೆಗೆ



ಮೂರು ಮಕ್ಕಳು–ದೂರ್ವಾಸ, ದತ್ತಾತ್ರೇಯ ಹಾಗೂ ಸೋಮ ಎಂಬವರು. ದೂರ್ವಾಸ ಬಹಳ ಕೋಪಿಷ್ಠ. ಬಹಳ ಸಿಟ್ಟಿನವರನ್ನು ನಾವು ದೂರ್ವಾಸನಿಗೆ ಹೋಲಿಸುತ್ತೇವೆ. ಈತ ಯಾವಾಗಲೂ ಜನರನ್ನು ಪರೀಕ್ಷಿಸುತ್ತ ತಿರುಗುತ್ತಿದ್ದ. ತಿಳಿದೋ ತಿಳಿಯದೆಯೋ ಜನರಿಂದೇನಾದರೂ ತಪ್ಪಾದರೆ, ಈತನ ಅನಾದರಣೆಯಾದರೆ ಒಡನೇ ಶಾಪ ಕೊಡುತ್ತಿದ್ದ. ಹಲವಾರು ಸಲ ತನ್ನ ಸಿಟ್ಟಿನಿಂದಾಗಿ ಈತನಿಗೆ ಕಷ್ಟ ದುಃಖಗಳು ಬರುತ್ತವೆ. ಕ್ರೋಧಿಯು ದುಃಖ ಅನುಭವಿಸಲೇ ಬೇಕಲ್ಲಾ? ಇದಕ್ಕೆ ವಿಪರೀತವಾಗಿ ಈತನ ತಮ್ಮ ಸೋಮ. ಸೋಮನೆಂದರೆ ಚಂದ್ರ. ಚಂದ್ರನೆಷ್ಟು ಶಾಂತನೆಂದು ಬಲ್ಲಿವು. ದತ್ತಾತ್ರೇಯ ಕೇವಲ ಶಾಂತನು ಮಾತ್ರವಲ್ಲ ಜ್ಞಾನಿಯೂ ಆಗಿದ್ದ. ಯಾವಾಗಲೂ ಜ್ಞಾನವನ್ನು ಅರಸುತ್ತಾ ತಿರುಗುತ್ತಿದ್ದ. ಎಲ್ಲಾದರೂ ಒಳಿತನ್ನು ಕಂಡರೆ, ಯಾರಲ್ಲಾದರೂ ಒಳ್ಳೆಯ ಗುಣ ಕಂಡರೆ ಒಡನೇ ಆತನನ್ನು ತನ್ನ ಗುರುವೆಂದು ಭಾವಿಸುತ್ತಿದ್ದ. ಇವನಿಗೆ 26 ಜನ ಗುರುಗಳಿದ್ದರು. ಅವುಗಳಲ್ಲಿ ಕಟುಕ, ನಾಯಿಯೂ ಕೂಡಿವೆ. ಇವನ ಶಿಷ್ಯರಲ್ಲಿ ಅನೇಕ ರಾಜ, ತಪಸ್ವಿ, ಋಷಿ, ಮುನಿ ಹಾಗೂ ಯೋಗಿಗಳಿದ್ದರು.

ಅತ್ರಿ ಕೇವಲ ಶಾಸ್ತ್ರಿ ಮಾತ್ರವಲ್ಲ. ವಿಜ್ಞಾನಿಯೂ ಹೌದು. ಸೂರ್ಯಚಂದ್ರರಿಗೆ ಗ್ರಹಣ ಹೇಗಾಗುತ್ತದೆ ಎಂಬುದನ್ನು–ಈತನೇ ಮೊದಲು ಕಂಡು ಹಿಡಿದನೆಂದು ಹೇಳುತ್ತಾರೆ. ಹೇಗೆ ಕಂಡು ಹಿಡಿದನೆಂದು ಇನ್ನೂ ಸರಿಯಾಗಿ ತಿಳಿದಿಲ್ಲ. ಇದರಿಂದ ಋಷಿಗಳು ಕೇವಲ ಓದು, ಓದಿಸುವುದರಲ್ಲೇ ಮಗ್ನರಾಗಿರದೆ ನಕ್ಷತ್ರ ವಿದ್ಯೆಯಲ್ಲಿಯೂ ಆಸಕ್ತರಾಗಿದ್ದರೆಂದು ತಿಳಿಯುತ್ತದೆ.

(24ನೇ ಪುಟ ನೋಡಿ)

# ಶ್ರೀ ವೆಂಕಟೇಶ್ವರಸ್ವಾಮಿದೇವಾಲಯ, ತಿರುಮಲೆ

# ಉದಯಾಸ್ತಮಾನ ಸರ್ವ ಸೇವಾ ಯೋಜನೆ

ವರ್ಷಕ್ಕೊಂದು ದಿನ ಶ್ರೀ ವೆಂಕಟೇಶ್ವರಸ್ವಾಮಿಯ ಎಲ್ಲ ಸೇವೆಗಳ ವೆಚ್ಚವನ್ನೂ ಭರಿಸುವ ದತ್ತಿಯನ್ನು ನೀಡ ಬಯಸುವ ಭಕ್ತರಿಗಾಗಿ ದೇವಸ್ಥಾನದಲ್ಲಿನ ಉದಯಾಸ್ತಮಾನ ಪರ್ಯಂತ ಎಲ್ಲ ಸೇವೆಗಳನ್ನೂ ಮಾಡಿಸಲು ಅವಕಾಶ ಕಲ್ಪಿಸಿಕೊಡುವ ಒಂದು ವಿಶೇಷ ಯೋಜನೆಯನ್ನು ರೂಪಿಸಲಾಗಿದೆ. ಈ ಸರ್ವಸೇವೆಯಲ್ಲಿ ಸುಪ್ರಭಾತ, ತೋಮಾಲೆ, ಅರ್ಚನೆ, (ಮೂರು ಬಾರಿ), ನೈವೇದ್ಯ ಹಾಗೂ ಇತ್ತರ ಸೇವೆಗಳು ಸೇರಿವೆ. ಈ ಯೋಜನೆಯ ಪರಿಧಿಯಲ್ಲಿ ಅರ್ಜಿತ ಸೇವೆಗಳಾದ ಕಲ್ಯಾಣೋತ್ಸವ, ಊಂಜಲ್‌ಸೇವೆ, ಬ್ರಹ್ಮೋತ್ಸವ, ಕೋಯಿಲ್ ಆಳ್ವಾರ್ ತಿರುಮಂಜನ, ಸಹಸ್ರ ಕಲಶಾಭಿ ಷೇಕ, ತಿರುಪ್ಪಾವಡ, ವಾಹನಸೇವೆಗಳು ಮೊದಲಾದವು ಬರುವುದಿಲ್ಲ.

ಈ ಯೋಜನೆಯ ಹಲವು ವೈಶಿಷ್ಟ್ಯಗಳು ಹೀಗಿವೆ;

* ಶುಕ್ರವಾರಗಳ ಹೊರತು ಇತರೆ ಯಾವುದೇ ದಿನಗಳ ಸರ್ವಸೇವೆಯ ದತ್ತಿಯಾಗಿ ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ ಇವರಿಗೆ 1 ಲಕ್ಷ ರೂಗಳ ಭಾರತದಲ್ಲಿನ ಯಾವುದೇ ಬ್ಯಾಂಕ್‌ನ ಡಿಮಾಂಡ್ ಡ್ರಾಫ್ಟ್ ಅನ್ನು ಕಳುಹಿಸಬೇಕು. ಶುಕ್ರವಾರಗಳಲ್ಲಿನ ಸರ್ವಸೇವೆಗಾಗಿ ನಿಗಧಿ ಆಗಿರುವ ದತ್ತಿಯ ಮೌಲ್ಯ ರೂ: 3 ಲಕ್ಷ. ಇದರಲ್ಲಿ ಶುಕ್ರವಾರದ ಅಭಿಷೇಕವೂ ಸೇರವುದು.

* ಗೊತ್ತಾದ ದಿನದಂದು ಎಲ್ಲ ಸೇವೆಗಳಿಗೂ ಆರು ಮಂದಿಗೆ ಪ್ರವೇಶ ನೀಡಲಾಗುವುದು. ಎಂದರೆ ಶುಕ್ರವಾರಗಳ ಹೊರತು ಸುಪ್ರಭಾತ, ತೋಮಾಲೆ, ಸಹಸ್ರನಾಮಾರ್ಚನೆ ಏಕಾಂತ ಸೇವೆಗಳು. ಆಯಾ ದಿನದಲ್ಲಿ ಇಲ್ಲಿನ ಯಾವುದೇ ಸೇವೆಯನ್ನು ಯಾವ ಕಾರಣಕ್ಕಾಗಿಯಾದರೂ ಮುಂದೂಡಲಾಗಿದ್ದಲ್ಲಿ ಅಂತಹ ಸೇವಾ ಪ್ರವೇಶವಿರದು.

* ದತ್ತಿ ನೀಡಿದವರ ಹೆಸರನ್ನು ದೇವಸ್ಥಾನದ ಒಳಗಡೆ ಎದ್ದು ಕಾಣುವಂತೆ ಬರೆದು ಪ್ರದರ್ಶಿಸಲಾಗುವುದು. ಆ ದಿನದ ಆಸ್ಥಾನದಲ್ಲಿ ಅವರ ಹೆಸರು ಗೋತ್ರಗಳನ್ನು ಹೇಳಲಾಗುವುದು.

* ಆ ದಿನದ ಎಲ್ಲ ಅರ್ಜಿತಸೇವೆಗಳನ್ನು ದತ್ತಿ ನೀಡಿದವರು ಹಾಗೂ ಅವರ ಪೈಕಿಯವರು ವೀಕ್ಷಿಸಲು ಅನುಮತಿ ನೀಡಲಾಗುತ್ತದೆ.

* ದತ್ತಿ ನೀಡಿದವರಿಗೆ (1) ಶ್ರೀ ವೆಂಕಟೇಶ್ವರಸ್ವಾಮಿಯವರ ಕಲ್ಯಾಣೋತ್ಸವದಲ್ಲಿ ಅಂದು ಬಳಸಲಾದ ಒಂದು ಶೇಷವಸ್ತ್ರ

  (2) 25 ಲಾಡು ಹಾಗೂ ವಡೆಗಳನ್ನು ಬಹೂಕರಿಸಲಾಗುವುದು.

* ವಸ್ತು, ವಿಷಯಗಳ ದರಗಳು ಅಸಹಜವಾಗಿ ಏರಿದಲ್ಲಿ ದತ್ತಿ ನೀಡಿದವರಿಗೆ ಹೆಚ್ಚಿನ ದತ್ತಿಯನ್ನು ನೀಡಲು ಅವಕಾಶ ನೀಡಲಾಗುವುದು (ಒಂದುಬಾರಿಗೆ 10% ದಂತೆ). ದತ್ತಿ ನೀಡಿದವರು ಈ ಹೆಚ್ಚಿನ ಮೊತ್ತವನ್ನು ನೀಡಲು ಮುಂದೆ ಬರದಿದ್ದಲ್ಲಿ ತಿ.ತಿ.ದೇ. ಬೇರೊಂದು ದತ್ತಿಯನ್ನು ಸ್ವೀಕರಿಸಲು ಸ್ವತಂತ್ರವಾಗಿರುತ್ತದೆ. ಆಗ ಸೇವೆಗಳನ್ನು ಇಬ್ಬರು ಅಥವಾ ಹೆಚ್ಚಿನ ಗೃಹಸ್ಥರ ಹೆಸರಿನಲ್ಲಿ ನಡೆಸಲಾಗುವುದು. ದತ್ತಿ ನೀಡಿದವರಿಗೆ ಸೇವಾ ದಿನವನ್ನು ಮೂವತ್ತು ದಿನಗಳ ಮೊದಲೇ ಸಾಮಾನ್ಯವಾಗಿ ತಿಳಿಸಲಾಗುವುದು.

ಇತರ ವಿವರಗಳಿಗೆ ಹಾಗೂ ಸ್ಪಷ್ಟೀಕರಣಕ್ಕೆ

ಬರೆಯಿರಿ:

**ಕಾರ್ಯನಿರ್ವಹಣಾಧಿಕಾರಿ**

ತಿ. ತಿ. ದೇ. ತಿರುಪತಿ.



# ಶರಣು

ರಾಮನಾರು ಕೃಷ್ಣನಾರು ಅರಿಯೆ ನಾನು ಕಾಣದೆ ।
ರಾಮನಾಮ ಕೃಷ್ಣನಾಮ ಒಂದೇ ಸಾಕು ನೆನೆಯಲು ॥ ॥ ೧ ॥

ರಾಮಗಾಥೆ ಕೃಷ್ಣಗೀತೆ ಓದಿ ಮನನ ಮಾಡದೆ ।
ಜನುಮ ವ್ಯರ್ಥ ಬಾಳು ಹಾಳು ಜನನ ಮರಣ ವ್ಯರ್ಥವು ॥ ॥ ೨ ॥

ತನ್ನ ರಾಜ್ಯಸುಖಕೆ ಮಿಗಿಲು ಪಿತನ ವಚನ ಮಾನ್ಯವು ।
ತನ್ನ ಸತಿಯಕಿಂತ ಪ್ರಿಯರು ಹಿತರು ಪ್ರಜರು ರಾಮಗೆ ॥ ॥ ೩ ॥

ದೇಹಿಯಾದ ಕರ್ಮಮಾಡು ನೀನು ಫಲವ ಬೇಡದೆ ।
ಜಗದಿ ಪುಟ್ಟಿ ಪುಣ್ಯ ಕರ್ಮ ಮಾಳ್ಪ ಭಕುತ ಶ್ಯಾಮಗೆ । ॥ ೪ ॥

ತಾಯಿ ದೇವ ತಂದೆ ದೇವ ದೇವ ಗುರು ಸರಸ್ವತೀ ।
ಸ್ವಜನ ಬಂಧು ವಿಶ್ವ ಬಂಧು ಪ್ರೀತಿ ಪ್ರಾಣ ರಾಮಗೆ ॥ ॥ ೫ ॥

ದೇವ ನೀನು ಅಸುರ ನೀನು ದೇವಭಾವ ಬೆಳೆಯಿಸು ।
ಜ್ಞಾನಿಯಾದ ಜೀವ ತಿಳಿದು ನನ್ನ ಪ್ರಿಯನು ಶ್ಯಾಮಗೆ ॥ ೬ ॥

ಕೊಟ್ಟ ವಚನ ಬಿಟ್ಟ ಬಾಣ ರಾಮವಚನ ರಾಮ ಬಾಣ ।
ಸತ್ಯವಹುದು ಪಾಪಹರವು ಬಾಣವಚನ ರಾಮಗೆ ॥ ॥ ೭ ॥

ವಿಧಿಯಕಿಂತ ಈಶಭಕುತಿ ಮೇಲು ಕೀರ್ತಿ ಪುರುಷಗೆ ।
ವಿಹಿತ ಕರ್ಮ ಮಾಡು ಕರ್ಮಫಲವ ಸಲಿಸು ಶ್ಯಾಮಗೆ ॥ ॥ ೮ ॥

ದುಃಖಿಗಳಿಗೆ ಧಾವಿಸಿ ರಾಮ ರಕ್ಷೆ ನೀಡಿದ ।
ಪತಿತರನ್ನು ಕೈಯ ಪಿಡಿದು ರಾಮ ಪೂತ ಮಾಡಿದ ॥ ॥ ೯ ॥

ನನ್ನ ನೆನೆದು ನನ್ನ ಭಜಿಸು ಯೋಗಿಯಾಗು ನನ್ನಲಿ ।
ನಿನ್ನ ಯೋಗಕ್ಷೇಮ ಹೊಣೆಯು ತನ್ನದೆಂದ ಶ್ಯಾಮನು ॥ ॥ ೧೦ ॥

ಮಾಡಿದವರು ಮಿತ್ರರೆಂದು ಕೃತಜ್ಞನಾದ ರಾಮನು ।
ಅಮಿತ್ರರನ್ನು ಕೆಡವಿ ರಾಮ ಮಿತ್ರರನ್ನು ಸಲುಹಿದ ॥ ॥ ೧೧ ॥

ಇಂದಿನಂತೆ ನಿನ್ನೆ ನೀನು ಎಂದಿನಂತನಂತನು ।
ಜೀವ ನಿತ್ಯ ಜಗವು ಸತ್ಯ ನಿತ್ಯ ಪರಮ ಸಾಧನ ॥ ॥ ೧೨ ॥

ಸತ್ಯಧರ್ಮದ್ರೋಹ ಬಗೆದ ದುಷ್ಟರನ್ನು ಕೆಡವಿದ ।
ಶಿಷ್ಟರನ್ನು ಸಲುಹಿ ಕೃಷ್ಣ ಶಾಂತಿ ಸುಖವ ನಿಲಿಸಿದ ॥ ॥ ೧೩ ॥

ಸರ್ವ ಶಕ್ತ ನಿನ್ನ ಭಕ್ತಿ ನನ್ನ ಮನದಿ ಬಿತ್ತಲಿ ।
ನನ್ನ ದೇಹದಲ್ಲಿ ಧರ್ಮ ಆಲದಂತೆ ಊರಲಿ ॥ ॥ ೧೪ ॥

ಪರಮ ಪತಿತ ನಾನು ರಾಮಕೃಷ್ಣ ಕರುಣಿಸು ।
ಕರುಣಿಸೆನ್ನ ಕರವ ಪಿಡಿದು ನಡೆಸು ನನ್ನ ನಿತ್ಯದಿ ॥ ॥ ೧೫ ॥

ನಿನಗೆ ನನ್ನ ಕೋಟಿ ನಮನ ರಾಮಕೃಷ್ಣ ಕರುಣಿಸು ।
ನಿನ್ನ ನಾನು ನೆನೆಯುವಂತೆ ರಾಮಕೃಷ್ಣ ಕರುಣಿಸು ॥ ॥ ೧೬ ॥

ನನ್ನ ಮನವು ನನ್ನ ತನುವು ನನ್ನ ವಾಣಿ ನಿನ್ನದು ।
ನಾನು ಬಿಡೆ ನಿನ್ನ ಶರಣು ಕರುಣಿಸೆನ್ನ ಕರುಣದಿ ॥ ॥ ೧೭ ॥

ನಿನ್ನ ನಾನು ಅರಿಯೆ ದೇವ ನನ್ನ ಅಳವು ಅಲ್ಲದು ।
ನಾನು ಅಧಮ ನಾನು ಖಳನು ನಾನು ಯಾರು ಅರಿಯೆನು ॥ ॥ ೧೮ ॥

ನಾನು ಕ್ರೂರ ನನ್ನ ಪಾಪ ಬೆಳೆಯದಂತೆ ಕರುಣಿಸು ।
ನಿನ್ನ ಕರುಣೆ ನೆರಳಿನಲ್ಲಿ ನನ್ನ ಪುಣ್ಯ ಬೆಳೆಯಿಸು ॥ ॥ ೧೯ ॥

ಅಮಲಚಿತ್ತ ಸರಳಬುದ್ಧಿ ದಾನ ಕ್ಷಾಂತಿ ಕರುಣಿಸು ।
ದಮನ ಮಧುರ ದಯಾ ಸತ್ಯ ಕರುಣೆ ಪ್ರೀತಿ ಕರುಣಿಸು ॥ ॥ ೨೦ ॥

ನಾನು ನಿನ್ನ ಮಹಿಮೆ ಕೇಳಿ ನಿನ್ನ ಗಾನ ಪಾಡುವೆ ।
ನಿನ್ನ ನೆನೆದು ಚರಣಕೆರಗಿ ಪೂಜೆಯನ್ನು ಮಾಡುವೆ ॥ ॥ ೨೧ ॥

ನಿನ್ನ ನಮಿಪೆ ನಿನ್ನ ದಾಸ ದಂಡಿಸೆನ್ನ ಪಾಪಕೆ ।
ನಿನ್ನ ಸ್ನೇಹವಿರಲಿ ಎನಗೆ ನಿನ್ನ ಪಾದಧಾಮದಿ ॥ ॥ ೨೨ ॥

ನನ್ನ ಪಾಪಕರ್ಮಕಣಜ ಕೋಟಿ ಕೋಟಿ ತುಂಬಿವೆ ।
ನನ್ನ ನೋಡಿ ಕರುಣೆಯಿಂದ ಶರಣು ನೀಡು ರಾಮನೇ ॥ ॥ ೨೩ ॥

ನಿನ್ನ ಬಿಟ್ಟು ಅಗಲದಂತೆ ನಿನ್ನ ನಾನು ಮರೆಯದಂತೆ ।
ನಿನ್ನ ನಾನು ಪೊಗಳುವಂತೆ ಕರುಣಿಸೆನ್ನ ಕೃಷ್ಣನೇ ॥ ॥ ೨೪ ॥

ರಾಮಕೃಷ್ಣ ಕೃಷ್ಣರಾಮ ಅಭಯ ನೀಡಿ ಕರುಣಿಸೋ ।
ಕೃಷ್ಣ ರಾಮ ರಾಮಕೃಷ್ಣ ತಿರುಮಲೇಶ ಪಾಲಿಸೋ ॥ ॥ ೨೫ ॥

— ನರಸಿಂಹ ಮಳಗಿ


ಮಾರಾಟಕ್ಕೆ ಸಿದ್ಧವಾಗಿವೆ
ತಾಮ್ರ ಚಿತ್ರಪಟಗಳು
ಶ್ರೀ ವೆಂಕಟೇಶ್ವರಸ್ವಾಮಿ
ಹಾಗೂ
ಶ್ರೀ ಪದ್ಮಾವತೀ ಅಮ್ಮನವರ
ಆಕರ್ಷಕ ತಾಮ್ರಚಿತ್ರಗಳ ಫಲಕಗಳು-
ಸುಲಭ ಬೆಲೆಯಲ್ಲಿ ದೀರ್ಘಕಾಲ
ಬಾಳಿಕೆ ಬರುವ ಸುಂದರ ತಾಮ್ರ ಚಿತ್ರಗಳು
ಎಲ್ಲ ತಿ. ತಿ. ದೇ. ಪ್ರಕಟನ ಮಾರಾಟ ಮಳಿಗೆಗಳಲ್ಲೂ
ದೊರೆಯುತ್ತವೆ.

## ಗೃಹಲಕ್ಷ್ಮಿ

ಚಿತ್ರದುರ್ಗದ ಹೆಸರನ್ನು ಕೇಳದೇ ಇರುವ ಕನ್ನಡಿಗರಾರೂ ಇರಲಾರರು. ಚಿತ್ರ ದುರ್ಗ ಎಂದೊಡನೆ ಪ್ರತಿಯೊಬ್ಬನಿಗೂ ಮೈನವಿರೇಳುವುದು. ಇಲ್ಲಿ ಅನೇಕ ರಾಜರು ಗಳಲ್ಲಿ ಪಾಳೆಯಗಾರರು ರಾಜ್ಯಭಾರ ಮಾಡಿ ಕೀರ್ತಿವಂತರಾಗಿದ್ದಾರೆ. ವೀರಗತ್ತಿ ಭರ ಮಣ್ಣನಾಯಕ, ಬಿಚ್ಚುಕತ್ತಿ ಭರಮಣ್ಣ ನಾಯಕ, ವೀರ ಮದಕರಿನಾಯಕ ಇತ್ಯಾದಿ ಅನೇಕ ನಾಯಕರು ಆಳಿದ್ದಾರೆ, ಕೀರ್ತಿವಂತ ರಾಗಿದ್ದಾರೆ. ದೇಶಕ್ಕೋಸ್ಕರ ಧೈರ್ಯ ದಿಂದ ವೈರಿಯ ಸೇನೆಯೊಡನೆ ಹೋರಾಡಿ ಕೀರ್ತಿ ಪಡೆದ ಒನಕೆ ಓಬವ್ವನನ್ನು ಪಡೆದ ಗಂಡುನಾಡಿದು.

ಚಿತ್ರದುರ್ಗದ ಬೆಟ್ಟ ಅತಿ ಪ್ರಾಚೀನ ವಾದುದು. ಇದು ತ್ರೇತಾಯುಗದಲ್ಲಿ, ಲಂಕಾಧೀಶನಾದ ರಾವಣನು ಕೈಲಾಸ ಪರ್ವತವನ್ನು ಹೊತ್ತುತರುವಾಗ, ಈಶ್ವರ ವಾಹನವಾದ ನಂದಿಯಿಂದ ಇರಿಯಲ್ಪಟ್ಟು ರಾವಣ ಬಿದ್ದ ಸ್ಥಳ ಎಂದೂ; ದ್ವಾಪರಯುಗ ದಲ್ಲಿ ಭೀಮನು, ಹಿಡಿಂಬ ಎಂಬ ರಾಕ್ಷಸ ನನ್ನು ಕೊಂದು. ಆತನ ತಂಗಿ ಹಿಡಂಬಿ ಯನ್ನು ಮದುವೆ ಆಗಿ, ಘಟೋತ್ಕಚನೆಂಬ ಪುತ್ರನನ್ನು ಪಡೆದ ಸ್ಥಳವೂ ಇದೇ ಅಲ್ಲದೆ, ಪಾಂಡವರ ಮೊಮ್ಮಗ ಜನಮೇಜಯ ಸರ್ಪ ಯಾಗ ಮಾಡಿದ ಸ್ಥಳವೂ ಸಹ ಇದೆ ಎಂದು ಪುರಾಣ ಪ್ರಸಿದ್ಧಿ ಪಡೆದ ನಾಡು.

ಪುರಾಣ ಪ್ರಸಿದ್ಧಿ ಪಡೆದ ಈ ಚಿತ್ರ ದುರ್ಗವನ್ನು ಆಳಿದ ನಾಯಕರುಗಳು ಪರಮ ದೈವಭಕ್ತರು. ಅವರು ಕುಲದೇವರು, ಆರಾಧ್ಯ ದೇವರು, ಇತ್ಯಾದಿ ದೇವತೆಗಳ ದೇವಸ್ಥಾನಗಳನ್ನು, ಕೋಟೆಯ ಸುತ್ತಲೂ, ಒಳಗೂ, ಕಟ್ಟಿಸಿ ಭಕ್ತಿಯಿಂದ ಪೂಜಿಸುತ್ತಿದ್ದರು. ಅವರುಗಳು ಯಾವುದೇ ಕೆಲಸವನ್ನು ಮಾಡುವ ಮೊದಲು, ದೇವರನ್ನು ಪೂಜಿಸಿ, ಆಶೀರ್ವಾದ ಪಡೆದು, ಮುಂದಿನ ಕೆಲಸ ವನ್ನು ಪ್ರಾರಂಭಿಸುತ್ತಿದ್ದರು. ಅಂತಹ ಅನೇಕ ದೇವರುಗಳಲ್ಲಿ "ಏಕನಾಥೇಶ್ವರೀ" ದೇವತೆ ಪ್ರಮುಖವಾದವಳು.

ಈ ಏಕನಾಥೇಶ್ವರೀ ದೇವಸ್ಥಾನವು ಕೋಟೆಯ ಮಧ್ಯರಂಗದ ಉತ್ತರಕ್ಕೆ ಎತ್ತ ರದ ಸ್ಥಳದಲ್ಲಿ ಯಾತ್ರಿಕರನ್ನು ಕೈ ಬೀಸಿ ಕರೆಯುತ್ತ ನಿಂತಿದೆ. ಪಾಳೆಯಗಾರರು ಏಕನಾಥೇಶ್ವರೀ ದೇವಿಯನ್ನು ಅನನ್ಯ ಭಕ್ತಿ ಯಿಂದ ಪೂಜಿಸುತ್ತಿದ್ದರು. ಒಂದು ಗುಹೆ ಯಲ್ಲಿದ್ದ ಈ ದೇವತೆಯನ್ನು ಮೊದಲನೆಯ ಪಾಳೆಯಗಾರನಾದ ಮತ್ತಿತಿಮ್ಮಣ್ಣ ನಾಯ ಕನು ಹೊರತಂದು ಪ್ರತಿಷ್ಠಾಪನೆಮಾಡಿ ದೇವಾಲಯವನ್ನು ನಿರ್ಮಿಸಿದನು. ನಂತರ ಕಾಲಕಾಲಕ್ಕೆ ಪಾಳೆಯಗಾರರಿಂದ ಪೋಷಿಸ ಲ್ಪಟ್ಟಿತು. ಅವರು ಯುದ್ಧಕ್ಕೆ ಹೋಗುವ ಮೊದಲು ಈ ದೇವಿಯನ್ನು ಭಕ್ತಿಯಿಂದ



ಪೂರ್ತಿದೇಹ ಕಲ್ಲಿನಲ್ಲಿ ಹೂತು ಹೋಗಿ ತಲೆಮಾತ್ರ ಹೊರಗುಳಿಯಿತು. 'ಏಕೆ ನಾಚುತಿ ಈಶ್ವರಿ'ಯು – 'ಏಕನಾಥೇಶ್ವರಿ'

# ಚಿತ್ರದುರ್ಗದ ಶ್ರೀ ಏಕನಾಥೇಶ್ವರೀದೇವಿ

ಪೂಜಿಸಿ, ಅಪ್ಪಣೆಯನ್ನು ಪಡೆದು, ಯುದ್ಧಕ್ಕೆ ಹೋಗುತ್ತಿದ್ದರು ಎಂದು ಜನಪದ ಸಾಹಿತ್ಯದಲ್ಲಿ ವರ್ಣಿಸಲಾಗಿದೆ.

ಹಿಂದೂಗಳು ಏಕನಾಥೇಶ್ವರಿಯ ಬಗೆಗೆ ಕಥೆಯೊಂದನ್ನು ಹೇಳುವುದುಂಟು. ಒಮ್ಮೆ ಕೈಲಾಸದಲ್ಲಿ ಪಾರ್ವತಿಯು ಸ್ನಾನಮಾಡು ತ್ತಿದ್ದಾಗ, ಹೊರಗೆ ಹೋಗಿದ್ದ ಪರಮೇಶ್ವ ರನು ಮನೆಗೆ ಬಂದು ಪಾರ್ವತಿಯನ್ನು ನೋಡಲು ಕಾಣಲಿಲ್ಲ. ಆಗ ನೇರವಾಗಿ ಸ್ನಾನಗೃಹಕ್ಕೆ ನುಗ್ಗಿದನು. ಆಗ ಸ್ನಾನ ಮಾಡುತ್ತಿದ್ದ ಪಾರ್ವತಿಯು ನಾಚಿ ಕರಗಿದ ಳಂತೆ. ಆಗ 'ಏಕೆ ನಾಚುತಿ ಈಶ್ವರಿ' ಎನ್ನುತ್ತಾ, ಶಿವನು ಪಾರ್ವತಿಯನ್ನು ಹಿಂಬಾಲಿಸಿದಾಗ, ಪಾರ್ವತಿಯು ಇಲ್ಲಿನ ಬಂಡೆಯಲ್ಲಿ ಅವಿತು ಕುಳಿತಳಂತೆ, ಆಕೆಯ

**ಶ್ರೀ ಬಿ. ಷಣ್ಮುಖಾಚಾರ್ಯ**

ಯಾದಳಂತೆ ಎಂಬುದು ಪ್ರತೀತಿ. ಶಿವನು ಸಹ ಸಿದ್ಧೇಶ್ವರನೆಂಬ ಹೆಸರಿನಿಂದ ಇಲ್ಲಿ ನೆಲ ಸಿದ್ದಾನಂತೆ. ತಂದೆ ತಾಯಿಯರಿಗೆ ಕಾವಲಾಗಿ ಕುಮಾರ ಗಣೇಶನೂ ಇಲ್ಲಿಯೇ ನೆಲ ಸಿದ್ದಾನೆ.

ಗರ್ಭಗುಡಿಯಲ್ಲಿರುವ ಏಕನಾಥೇಶ್ವರಿಯ ಮುಂಡದ ಹೊರತು ೩ ಅಡಿ ಎತ್ತರದಷ್ಟು ಬಂಡೆಯಲ್ಲಿಯೇ ಕುಳಿತಿದ್ದಾಳೆ. ಈ ವಿಗ್ರ ಹದ ಪಕ್ಕದಲ್ಲಿ ಕಾಳಿಕಾ ವಿಗ್ರಹವೂ, ನವ ರಂಗದಲ್ಲಿ ಭೈರವೇಶ್ವರಮೂರ್ತಿಯೂ ಇವೆ. ಹೊರಾಂಗಣದಲ್ಲಿ ನಾಯಕರ ಶಿಲಾಮೂರ್ತಿ ಗಳಿವೆ. ಈ ಗುಡಿಯ ಮುಖ ಮಂಟಪ ಕಲೆಯ ದೃಷ್ಟಿಯಿಂದ ಅಮೂಲ್ಯವಾದುದು. ಮಂಟಪದ ಮೇಲ್ಭಾಗದಲ್ಲಿ ನಾನಾ ಆಕಾರದ ಗೊಂಬೆಗಳನ್ನೂ, ಕಲಾಕೃತಿಗಳನ್ನು ಬಿಡಿ ಸಿದ್ದಾರೆ ಕಲಾಕಾರರು. ಇದನ್ನು ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಾಣ ಮಾಡಿ ದ್ದಾರೆ.

# ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

## ದರ್ಶನ ಹಾಗೂ ಸೇವಾ ವಿವರಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ 5-00 | ಪ್ರಾ 5-30 |
| ವಿಶ್ವರೂಪ ಸರ್ವದರ್ಶನ* | ಪ್ರಾ 5-30 | ಪ್ರಾ 7-00 |
| ತೋಮಾಲ ಸೇವೆ | ಪ್ರಾ 7-30 | ಪ್ರಾ 8-00 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಅರ್ಚನೆ | ಪ್ರಾ 8-00 | ಪ್ರಾ 8-30 |
| (ಅರ್ಜಿತ ಪ್ರತಿವ್ಯಕ್ತಿಗೆ ರೂ 4-00) | | |
| ಸರ್ವದರ್ಶನ | ಪ್ರಾ 9-00 | ಮ 12-30 |
| | ರಾ 7-00 | ರಾ 8-45 |
| | ರಾ 9-00 ಕ್ಕೆ | |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ 5-30 ರಿಂದ ಪ್ರಾ 6-30 ರ ವರೆಗೆ ಮಾತ್ರ.

## ಆರ್ಜಿತ ಸೇವೆಗಳು

| | | |
|---|---|---|
| 1. | ಗರುಡವಾಹನ | 32-00 |
| 2. | ಚಂದ್ರಪ್ರಭ ವಾಹನ | 32-00 |
| 3. | ಗಜವಾಹನ | 32-00 |
| 4. | ಅಶ್ವವಾಹನ | 32-00 |
| 5. | ಸಿಂಹವಾಹನ | 32-00 |
| 6. | ಹಂಸವಾಹನ | 32-00 |
| 7. | ಚಿಕ್ಕಶೇಷವಾಹನ | 32-00 |
| 8. | ದೊಡ್ಡ ಶೇಷವಾಹನ | 62-00 |
| 9. | ಸೂರ್ಯಪ್ರಭವಾಹನ | 62-00 |

## ಪಡಿಪ್ರಸಾದಗಳು

| | | | |
|---|---|---|---|
| 1. | ದೋಸೆ | ಕಾಲಸೋಲ | 35-00 |
| 2. | ದಧ್ಯೋದನ | " | 40-00 |
| 3. | ಪುಳಿಯೋಗರೆ | " | 50-00 |
| 4. | ಪೊಂಗಲು | " | 55-00 |
| 5. | ಸಕ್ಕರಪೊಂಗಲ್ | " | 65-00 |
| 6. | ಶಾಕರ ಭಾತ್ | " | 85-00 |
| 7. | ಕೇಸರೀ ಭಾತ್ | " | 90-00 |
| 8. | ಸೀರ | " | 155-00 |

ವಿವರಗಳಿಗೆ :

**ಪೇಷ್ಕಾರ್**

ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ.

ಏಕನಾಥೇಶ್ವರಿ ಗುಡಿಯ ಮುಂಭಾಗದ ತಗ್ಗು ಆವರಣದಲ್ಲಿ 40 ಅಡಿ ಎತ್ತರದ ಏಕ ಶಿಲಾಸ್ತಂಭವು ಇದೆ. ಈ ದೀಪಸ್ತಂಭದ ಬುಡದಲ್ಲಿ ಪೂರ್ವದಿಕ್ಕಿನ ಪಾರ್ಶ್ವದಲ್ಲಿ ಕನ ಕಮ್ಮ ನಗಾರಿಯ ಚಿತ್ರವನ್ನು, ಉತ್ತರ ಪಾರ್ಶ್ವದಲ್ಲಿ ಗಡ್ಡದ ಮದಕರಿನಾಯಕನ ಕೃತಿ ಯನ್ನು ಕೆತ್ತಲಾಗಿದೆ. ಇವು ಯಾತ್ರಿಕರನ್ನು ಆಕರ್ಷಿಸದೇ ಇರುವುದಿಲ್ಲ. ಏಕನಾಥೇಶ್ವರಿ ಗುಡಿಯೊಳಗಿಂದ ನೋಡಿಗರೆ ಈ ಸ್ತಂಭದ ಕೊನೆಯೂ ಅದನ ಮೇಲಿನ ಹಣತೆಯೂ ಕಾಣುತ್ತದೆ. ಕೆಲವು ವಿಶೇಷ ಸಂದರ್ಭ ಗಳಲ್ಲಿ, ಈ ಸ್ತಂಭದ ತುದಿಯಲ್ಲಿರುವ ಹಣತೆಯನ್ನು ಹೊತ್ತಿಸುವುದರ ಮೂಲಕ ಈ ದೇವಿಗೆ ಗೌರವ ಸೂಚಿಸುತ್ತಿದ್ದರೆಂದು ಹೇಳಲಾಗುತ್ತದೆ. ಸ್ತಂಭದ ಮೇಲಿರುವ ಭಾಗವು 19 ಮುಖಗಳಿಂದ ಕೂಡಿದ್ದು, ಇದರ ಮೇಲೇರಲು ಅನುಕೂಲವಾಗುವಂತೆ ಕಲ್ಲು ಹಿಡಿಕೆಗಳನ್ನು 2 ಸಾಲುಗಳಲ್ಲಿ ಕೆತ್ತಿರುವರು. ಹಿಂದೆ ಈ ಕಂಬವನ್ನು ಎಷ್ಟುಸಾರಿ ನಿಲ್ಲಿ ಸಿದರೂ ನಿಲ್ಲದೇ ಇದ್ದುದರಿಂದ, ಗರ್ಭವತಿ ಯಾದ ಗಾಣಿಗರ ಚೆನ್ನಮ್ಮಳೆಂಬ ಹೆಂಗಸು ಸ್ವ ಇಚ್ಛೆಯಿಂದ ಬಲಿಯಾದನಂತರ ಸ್ಥಿರ ವಾಗಿ ನಿಂತಿತೆಂಬ ನೀತಿಯ ಕಥೆಯೊಂದು ಪ್ರಚಾರದಲ್ಲಿದೆ. ಆದ್ದರಿಂದ ಈ ಕಂಬವನ್ನು 'ಕಂದಮ್ಮ' ಎಂದೂ, ಮಕ್ಕಳಿಲ್ಲದ ಹೆಂಗ ಸರೂ ಮತ್ತು ರೋಗಿಗಳೂ ಹರಕೆ ಹೊರುವ ರೂಢಿಯಲ್ಲಿದೆ.

ಹಿಂದೆ ವರ್ಷಕ್ಕೊಮ್ಮೆ ಇಲ್ಲಿ ವಸಂತೋ ತ್ಸವ ಹಬ್ಬವನ್ನು ಆಚರಿಸಲಾಗುತ್ತಿತ್ತು, ದೀಪಸ್ತಂಭದ ಪಕ್ಕದಲ್ಲಿ ಕಲ್ಲಿನ ತೋರಣ ಅಥವಾ ಉಯ್ಯಾಲೆ ಕಂಭಕ್ಕೆ ಸಂಪಳಿಯ ಸಹಾಯದಿಂದ ತೂಗುಮಣೆ ಕಟ್ಟಿ ಅದರಲ್ಲಿ ಏಕನಾಥೇಶ್ವರಿಯ ವಿಗ್ರಹವನ್ನು ಕೂರಿಸಿ ಸಂಭ್ರಮದಿಂದ ತೂಗುತ್ತಿದ್ದರು.

ಕೊನೆಯ ಕೋಟೆಯ ಹೆಬ್ಬಾಗಿಲಿನತ್ತ ಸಾಗುವ ದಾರಿಯಲ್ಲಿ ಹಾಸಿರುವ ಕಲ್ಲುಗಳಲ್ಲಿ ಒಂದು ಜೊತೆಯ ಪಾದವನ್ನು ಕೆತ್ತಿರುವ ಕಲ್ಲನ್ನು ಇಟ್ಟಿದ್ದಾರೆ. ಇದನ್ನು ಏಕನಾಥೇ ಶ್ವರಿಯ ಪಾದವೆನ್ನುವರು. ಈ ಬೆಟ್ಟದಲ್ಲಿ ನೆಲೆಸುವ ಸಲುವಾಗಿ ಕೈಲಾಸದಿಂದ ಧರೆ ಗಿಳಿದ (ಪಾರ್ವತಿ) ಏಕನಾಥೇಶ್ವರಿಯು ಮೊಟ್ಟಮೊದಲು ಊರಿದ ಪಾದದ ಗುರುತು ಗಳಿವು ಎಂಬ ಐತಿಹ್ಯ ಈ ಹಿನ್ನಲೆಯಲ್ಲಿದೆ.

ಒಮ್ಮೆಯಾದರೂ ಚಿತ್ರದುರ್ಗಕ್ಕೆ ಹೋಗಿ ಅಲ್ಲಿನ ಕೋಟೆಯನ್ನು ಅಗಿನ ಕಾಲದ ನಾಯಕರುಗಳ ಸಾಹಸವನ್ನೂ, ಅಲ್ಲಿನ ಇತಿಹಾಸವನ್ನೂ ತಿಳಿದುಕೊಳ್ಳುವುದು ಒಂದು ಸಾಹಸವೇ. ಜೊತೆಗೆ ಏಕನಾಥೇಶ್ವರಿ ದರುಶನ ಭಾಗ್ಯವನ್ನೂ ಪಡೆದು ಕೃತಾರ್ಥ ರಾಗೋಣ.

★

---

(19ನೇ ಪುಟದಿಂದ)

ಇನ್ನೊಬ್ಬ ಅತ್ರಿ ಋಷಿ ಇದ್ದ, ಅವನ ಮಗಳ ಹೆಸರು ಅಪಾಲ ಎಂದು. ಇವಳಿಗೆ ಕುಷ್ಠರೋಗ ಬಂತು. ಆಕೆ ಇಂದ್ರನನ್ನು ಪೂಜಿಸಿದಳು. ಇಂದ್ರ ಪ್ರಸನ್ನನಾಗಿ ಆಕೆಯ ಕುಷ್ಠರೋಗ ದೂರ ಮಾಡಿದ –ನಂತರ ಅಪಾಲ ಸುಂದರ ಸ್ತ್ರೀಯಾದಳು. ಈ ಅತ್ರಿ ಋಷಿಯ ಮಗನ ಹೆಸರು ಅರ್ಚನಾನಾ ಎಂದು. ಈತನೂ ತಂದೆಯಂತೆಯೇ ಋಷಿ. ಈತನ ಮಗನ ಹೆಸರು ಶ್ಯಾವಾಶ್ವ ನೆಂದು. ಈತನ ಬಹಳ ಸುಂದರನೂ, ಗುಣಿಯೂ ವಿದ್ವಾಂಸನೂ ಆಗಿದ್ದ. ತನ್ನ ಮಗನ ಮದುವೆ ದೇಶದ ರಾಜನಾದ ರಥ ಬೀತಿಯ ಮಗಳೊಡನೆ ಆಗಬೇಕೆಂದು. ತಂದೆಯ ಇಚ್ಛೆ, ಆದರೆ ರಾಣಿ ಶ್ಯಾವಾಶ್ವನಿಗೆ ಮಗಳನ್ನು ಕೊಡಲು ನಿರಾಕರಿಸಿದಳು. ಆತ ಕಾಡಾಡಿ, ನಿರ್ಧನ ನೆಂದಲ್ಲ. ಆತ ಋಷಿಯಲ್ಲನೆಂಬ ಕಾರಣದಿಂದ ಆಕೆ ಒಪ್ಪಲಿಲ್ಲ ಅಷ್ಟೆ. ಅರ್ಚನಾನಾ ಋಷಿ ಯಾಗಿದ್ದ. ಆದರೆ ಶ್ಯಾವಾಶ್ವ ಋಷಿಯಾಗಿರಲಿಲ್ಲ.

ಈ ಮಾತಿನಿಂದ ಅರ್ಚನಾನಾನಿಗಾಗಲೀ, ಶ್ಯಾವಾಶ್ವನಿಗಾಗಲೀ ಬೇಸರವಾಗಲಿಲ್ಲ, ಶ್ಯಾವಾಶ್ವ ಅಂದಿನಿಂದಲೇ ಘೋರ ತಪಸ್ಸನ್ನಾಚ ರಿಸಿ ವೇದ ಮಂತ್ರಗಳನ್ನು ರಚಿಸುವಷ್ಟು ಶಕ್ತಿ ಪಡೆದು ಋಷಿಯಾದ. ಒಡನೆ ರಥಬೀತಿಯ ಬಳಿಗೆ ಹೋದ. ಅತನನ್ನು ನೋಡಿ ರಾಜ ರಾಣಿಯರು ಸಂತಸದಿಂದ ತಮ್ಮ ಮಗಳನ್ನು ಮದುವೆ ಮಾಡಿ ಕೊಟ್ಟರು.

ಈ ಕತೆಯಿಂದ ಆಗಿನ ಕಾಲದ ರಾಜರು ಋಷಿ ಗಳನ್ನು ಗೌರವಿಸುತ್ತಿದ್ದರೆಂದೂ, ಋಷಿಗಳೂ ಅಹಂ ಕಾರಿಗಳಾಗದೆ ಯಾವಾಗಲೂ ಸತ್ಯವನ್ನು ಶಿರಸಾ ವಹಿಸುತ್ತಿದ್ದರೆಂದೂ ತಿಳಿದು ಬರುತ್ತದೆ. ಆದುದ ರಿಂದ ಸಾವಿರಾರು ವರ್ಷಗಳ ಕಾಲದ ನಂತರವೂ ಅವರನ್ನು ನೆನೆಯುತ್ತೇವೆ.

(ವಿವಿಧ ಮೂಲಗಳಿಂದ)

# ಗೋವೆಯ ಶ್ರೀ ಕಾಮಾಕ್ಷೀ ದೇವಾಲಯ

ದೇವಭೂಮಿ ಗೋವಾ ಭೌಗೋಳಿಕವಾಗಿ ಕಡಲತೀರದಲ್ಲಿ ಹಬ್ಬಿದ, ಸುಮಾರು 8 ಲಕ್ಷ ಜನ ಸಂಖ್ಯೆಯ, ಸಾವಿರಾರು ದೇವ ದೇವತೆಗಳ, ಮಸೀದಿಗಳ, ಕ್ರೈಸ್ತ ಮಂದಿರಗಳನ್ನು ಹೊಂದಿದ ಒಂದು ಪುಟ್ಟ ಪ್ರಪಂಚ, ಜೈನ, ಬೌದ್ಧ ಮಂದಿರಗಳು ಹಾಗೂ ಪ್ರಸಿದ್ಧ ದೇವಾಲಯಗಳು, ಮಠಗಳನ್ನು ಹೊಂದಿದ ಈ ಪ್ರಾಂತ್ಯವು ಪ್ರವಾಸಿಗರ ಸ್ವರ್ಗವಾಗಿದೆ. ಕುತೂಹಲಕಾರಿ "ಗೋವೆ"ಯು ಒಂದು ಪ್ರಸಿದ್ಧ ಯಾತ್ರಾ ಹಾಗೂ ಪ್ರೇಕ್ಷಣೀಯ ಸ್ಥಳವಾಗಿದೆ. ಉತ್ತರಕ್ಕೆ ಮಹಾರಾಷ್ಟ್ರ, ದಕ್ಷಿಣಕ್ಕೆ ಕರ್ನಾಟಕ ತಬ್ಬಿಕೊಂಡಿರುವ ಇಂದಿನ ಗೋವಾರಾಜ್ಯವು ಮಧ್ಯ ಕೊಂಕಣವೆಂದು ದೇಶ ವಿದೇಶಗಳಲ್ಲಿ ತನ್ನದೇ ಆದ ವೈಶಿಷ್ಟ್ಯದಿಂದ ಪ್ರಾಚೀನ ಕಾಲದಿಂದಲೂ ಮೆರೆದಿದೆ. ಪುರಾತನ ಕಾಲದಲ್ಲಿ ಪರಶುರಾಮ, ಶ್ರೀ ಕೃಷ್ಣಾದಿ ಅವತಾರ ಪುರುಷರ ಪಾದ ಸ್ಪರ್ಶದಿಂದ ಪುನೀತವಾಗಿ ಪರಶುರಾಮ ಸೃಷ್ಟಿಯ ಸಜೀವ ಸಾಕ್ಷಿಯಾಗಿ ನಿಂತಿದೆ. ಕದಂಬ, ಚಾಲುಕ್ಯ, ವಿಜಯನಗರ, ಅರಸು ಮನೆತನಗಳು ಈ ನೆಲವನ್ನು ಆಳಿವೆ.

ಇಲ್ಲಿಯ ಮಂದಿರಗಳ ವಾಸ್ತು ಶಿಲ್ಪಗಳು ಪಾಶ್ಚಾತ್ಯ-ಪೌರಾತ್ಯ ಶಿಲ್ಪ ಕಲೆಯ ಸಂಗಮವಾಗಿವೆ. ಎಲ್ಲಾ ದೇವ ಮಂದಿರ ಮಹಿಮೆಗಳೂ ಅದ್ಭುತವಾದ ಕಥೆಗಳಿಂದ ಕೂಡಿವೆ. ಗೋವೆಯ ದೇವಾಲಯಗಳಲ್ಲಿ ಕೆಲವು ವಿಜಯನಗರದ ಶೈಲಿಯ ಪ್ರಭಾವ ಕಂಡು ಬಂದರೆ, ಕೆಲವುಕಡೆ ಮಂದಿರದ ಹೊರನೋಟ ಮುಸ್ಲಿಂ ಶೈಲಿಯ ಪ್ರಭಾವ ಎದ್ದು ಕಾಣುತ್ತದೆ. ಕೆಲವು ಕಡೆ ಲ್ಯಾಟಿನ್ ಶೈಲಿಯ ಪ್ರಭಾವವು ಕಂಡು ಬರುತ್ತದೆ.

ಕಾಮಾಕ್ಷಿ ದೇವಾಲಯವು ಗೋವಾ ಪ್ರಾಂತ್ಯದಲ್ಲಿರುವ ಪ್ರಸಿದ್ಧ ದೇವಾಲಯಗಳಲ್ಲೊಂದು. ಕಾರವಾರದ ಸದಾಶಿವಗಡದಿಂದ ಅಥವಾ ಹುಬ್ಬಳ್ಳಿಯಿಂದ ಇಲ್ಲವೇ ಬೆಂಗಳೂರಿನಿಂದ ನೇರ ಬಸ್ಸುಗಳಿವೆ. ಗೋವಾದ ರಾಜಧಾನಿ ಪಣಜಿಯಿಂದ ಫೋಂಡಾ ಮಾರ್ಗವಾಗಿ ಬಂದರೆ "ಬೋರಿಂ" ಸೇತುವೆ ಸಿಗುತ್ತದೆ. ಅಥವಾ ಮಡಗಾಂವದಿಂದ ಪಣಜಿಗೆ ಹೋಗುವಾಗ ಸಹ ಬೋರಿಂ ಸೇತುವೆಯನ್ನು ಹಾದು ಹೋಗಬೇಕಾಗುತ್ತದೆ. ಬೋರಿಂ ಸೇತುವೆ ಬಳಿ ಕೆಳಗಡೆಯಿಂದ ಕೆಂಪು ಮಣ್ಣಿನ ದಾರಿ ಶಿರೋಡೆಗೆ ಹೋಗುತ್ತದೆ. ಶಿರೋಡೆಯ ಹತ್ತಿರವೇ ಶ್ರೀ ಕಾಮಾಕ್ಷಿ ಮಂದಿರವಿದೆ. ಪಣಜಿ ಇಲ್ಲವೇ ಮಡಗಾಂವದಿಂದ ಶಿರೋಡೆಗೆ ನೇರ ಬಸ್ಸುಗಳಿವೆ.

ಶ್ರೀ ಕಾಮಾಕ್ಷಿ ದೇವಾಲಯಕ್ಕೆ ಹೋಗುವಾಗ ಪ್ರಥಮವಾಗಿ ಭವ್ಯ ಕಮಾನಿನ ಹೆಬ್ಬಾಗಿಲು ನಮ್ಮನ್ನು ಸ್ವಾಗತಿಸುತ್ತದೆ. ದಾರಿಯಲ್ಲಿ ಹೊರಟು ಅನೇಕ ಮೆಟ್ಟಿಲುಗಳನ್ನು ಇಳಿದು ಹೋದ ಕೂಡಲೇ ನಮ್ಮ ದೃಷ್ಟಿ ಸುಂದರವಾಗಿ ಕಂಗೊಳಿಸುವ ಕಾಮಾಕ್ಷೀ ಗುಡಿಯ ಗೋಪುರದ ಮೇಲ್ಬದಿಗೆ ಹೋಗುತ್ತದೆ, ಸುತ್ತಲೂ ಅಗ್ರಹಾರದ ಕಟ್ಟಡಗಳು ಮುಂದೆ ದೊಡ್ಡ ದೀಪ ಸ್ತಂಭ, ಸುತ್ತಲೂ ದೇವಾಲಕ್ಕೆ ಸಂಬಂಧಿಸಿದ ಮನೆಗಳು ಇವೆ. ಶ್ರೀ ಕಾಮಾಕ್ಷೀ ಮಂದಿರ ಪೂರ್ವಾಭಿಮುಖವಾಗಿವೆ. ಮುಂಭಾಗದಲ್ಲಿ ಎತ್ತರವಾದ ದೀಪಸ್ತಂಭ, ವಿಸ್ತಾರ ಸಭಾಮಂಟಪ, ನಮ್ಮನ್ನು ಆಕರ್ಷಿಸುತ್ತದೆ. ದೇವಾಲಯದ ಮುಂದಿರುವ ತಿಳಿನೀರಿನ ಕೆರೆ ದೇವರ ಅಸ್ತಿತ್ವಕ್ಕೆ ಸ್ಫೂರ್ತಿ ನೀಡಿವೆ, ಲಕ್ಷಾಂತರರೂಪಾಯಿ ವೆಚ್ಚದಲ್ಲಿ ನಿರ್ಮಾಣಗೊಂಡ ರಾಯಕರ ವಸತಿಗೃಹ ಹಾಗೂ ದೇವಾಲಯ ಆಡಳಿತ ಮಂಡಳಿಯವರು ನಿರ್ಮಿಸಿದ ಆಧುನಿಕ ವಸತಿ ಗೃಹ-ಇವೆಲ್ಲವನ್ನು ನೋಡಿದಾಗ ನಮಗೆ ನವ್ಯಸ್ಫೂರ್ತಿ ಉಕ್ಕುತ್ತದೆ. ಅಲ್ಲಿಯ ತೇಜಸ್ಸು ಹಾಗೂ ದಿವ್ಯಕಳೆಯಿಂದ ನಮ್ಮ ಮನಸ್ಸು ಸೆರೆ ಹಿಡಿಯುತ್ತದೆ.

ಶ್ರೀ ಕಾಮಾಕ್ಷೀ ದೇವಾಲಯವು ಪೂರ್ವಾಭಿಮುಖವಾಗಿ ವಿಶಾಲವಾದ ಸಭಾಮಂಟಪ, ದಿವ್ಯ ಗೋಪುರ, ಇಳಿಬಿಟ್ಟ ಅಲಂಕೃತ ದೀಪಗಳು ಸಿಂಗರಿಸಿದ ಮಂಟಪ, ಗರ್ಭಗುಡಿಯ ದ್ವಾರದಲ್ಲಿ, ಪಾಶ್ಚಾತ್ಯ ಶಿಲ್ಪದಲ್ಲಿ ದ್ರಾಕ್ಷಿಬಳ್ಳಿ ಯಿಂದ ಕೂಡಿದ ಬೆಳ್ಳಿಯ ಚೌಕಟ್ಟು, ಮೇಲೆ ಮಧ್ಯದಲ್ಲಿ ಗಣಪತಿ ಮೂರ್ತಿಗಳು, ಚಿತ್ರ-ಭಾವಚಿತ್ರಗಳಿಂದ ಹೃದಯ ಸೆಳೆಯುತ್ತದೆ.

## ಇತಿಹಾಸ

ಬಂಗಾಲದಲ್ಲಿ ಕಾಮಾಖ್ಯಾ ಅಥವಾ ಕಾಮಾಕ್ಷಿ ಮಂದಿರವಿದೆ. ಇತಿಹಾಸವು ಬಂಗಾಲದ ಕಾಮರೂಪ ನಗರಕ್ಕೆ ಸಂಬಂಧಿಸಿದ್ದಾಗಿದೆ. ಶಕ್ತಿ ಪೀಠಗಳಲ್ಲಿ ಭಾರತದಲ್ಲಿಯೇ ಪ್ರಸಿದ್ಧ ಪಡೆದ ಈ ಕ್ಷೇತ್ರವು ತೀರ್ಥ ಸ್ಥಾನಗಳ ವೈಶಿಷ್ಟ್ಯಗಳಲ್ಲಿ ಗಣಿಸಲ್ಪಡುತ್ತದೆ.

ಶಿರೋಡೆಯಲ್ಲಿರುವ ಕಾಮಾಕ್ಷೀ ದೇವಿಯನ್ನು ಕೋರಂಜ ಅಥವಾ ಕಾಹೂರ ದೇಶದಿಂದ ತಂದರೆಂದು "ಕೊಂಕಣಾಖ್ಯಾನ" ವೆಂಬ ಗ್ರಂಥದಿಂದ ತಿಳಿದು ಬರುತ್ತದೆ. ಈಗ್ರಂಥವು ಸುಮಾರು 300 ವರ್ಷಗಳ ಹಿಂದೆ ಬರೆದದ್ದು. ಇನ್ನೊಂದು ಹೇಳಿಕೆಯ ಪ್ರಕಾರ ಲೋಟಲಿಯ (ಗೋವಾ) ಶ್ರೀ ರಾಮನಾಥ ದೇವರ ಉಪಾಸಕನಾದ ಒಬ್ಬ ಗೌಡ ಸಾರಸ್ವತ ಬ್ರಾಹ್ಮಣನು ತೀರ್ಥಯಾತ್ರೆಗೆ ಹೋದಾಗ ಕಾಮಾಕ್ಷೀ ದೇವಿಯ ದರ್ಶನ ಪಡೆದು ಅಂದಿನರಾತ್ರಿ ಅಲ್ಲಿಯೇ ಮಲಗಿದನು. ಅಂದು ಅವನಿಗೆ ಸ್ವಪ್ನದೃಷ್ಟಾಂತವಾಯಿತು. ಮರುದಿನವೇ ಕಾಮಾಕ್ಷಿ ಮತ್ತು ಭೈರವನ ಶಿಲಾ ಮೂರ್ತಿಗಳು ದೊರೆತವು. ಸ್ವಪ್ನದಲ್ಲಿ ಆದ ದೇವರ ಆದೇಶದಂತೆ ಆ ಬ್ರಾಹ್ಮಣನು ಎರಡು ಮೂರ್ತಿಗಳನ್ನು ಹೊತ್ತುಕೊಂಡು ಗೋವೆಗೆ ಬರಲು ಹಿಂತಿರುಗಿ ಲೋಟಲಿಗೆ ತಂದು ಸ್ಥಾಪಿಸಬೇಕೆಂದು ನಿಶ್ಚಯಿಸಿದನು.

ಆದರೆ ಆ ಮೂರ್ತಿಗಳನ್ನು ಭೂಸ್ಪರ್ಶ ಮಾಡದೇ, ನಡೆನಡೆದು ತರಲು ಆಯಾಸವಾಗಿ

ಮಂಗಳಮಯ ವಾತಾವರಣ ವರ್ಣಿಸಲು ಅಸಾಧ್ಯ.

## ದೇವಾಲಯ

ಶ್ರೀ ಕಾಮಾಕ್ಷೀ ಮೂರ್ತಿಯು ನಯನ ರಮ್ಯವಾಗಿದೆ. ಪಂಚಲೋಹದಿಂದ ರಚಿತವಾದ ಶ್ರೀ ಕಾಮಾಕ್ಷೀ ಮೂರ್ತಿಯ ರೂಪವು ಮಹಿಷಾಸುರ ಮರ್ಧಿನಿಯದೇ ಎಂದು ಭಾವುಕರು ನಂಬುತ್ತಾರೆ. ಸಹ್ಯಾದ್ರಿ ಖಂಡದಲ್ಲಿ ಈ ದೇವಿಯ ಬಗೆಗೆ ಕಾಮಾಕ್ಷಿಕಾ ಎಂಬ ಉಲ್ಲೇಖ ದೊರೆಯುತ್ತದೆ. ಈ ದೇವಿಯ ಪ್ರಾರ್ಥನಾ ಸ್ತೋತ್ರದಲ್ಲಿ ಸಪ್ತಶತಿಯಲ್ಲಿ ಬರುವ ಸ್ತೋತ್ರಗಳನ್ನೇ ಅಳವಡಿಸಿಕೊಂಡಿದ್ದಾರೆ.

ವಿಗ್ರಹ ಅಲಂಕಾರವಾದ ಆಭರಣಗಳಿಂದ ಶೋಭಿತವಾಗಿದೆ. ವಜ್ರ ವೈಡೂರ್ಯಗಳಿಂದ ಅಲಂಕೃತವಾಗಿ ತಲೆಯ ಮೇಲೆ ಕಲೆಯ ಕುಸುರಿಯ ರತ್ನಖಚಿತ ಸುವರ್ಣ ಮುಕುಟ ಇರುವ ಈ ಮೂರ್ತಿ ಶಾಂತ, ಸಾತ್ವಿಕ

ಶ್ರೀ ಬಿ. ಬಸವರಾಜ್‌ಶೇಟ್

ಸಮೀಪದ ಹಳ್ಳಿಯಾದ "ರಾಯ" ವೆಂಬ ಹಳ್ಳಿಯಲ್ಲಿ ತನ್ನ ತಂಗಿಯ ಮನೆಯಲ್ಲಿ ಉಳಿದು, ಮನೆಯ ಗೂಟಕ್ಕೆ ಮೂರ್ತಿಗಳ ಚೀಲ ಸಿಗಿಸಿ ವಿಶ್ರಾಂತಿ ತೆಗೆದು ಕೊಂಡನು, ಮನೆಯ ಮಕ್ಕಳು ಮಾವನವರು ಏನು ತಿಂಡಿ ತಂದಿರುವರೆಂದು ಆ ಮೂರ್ತಿಗಳ ಚೀಲವನ್ನು ನೆಲದಮೇಲೆ ಇಟ್ಟು ಬಿಚ್ಚಿ ನೋಡಲಾಗಿ ನಿರಾಶರಾಗಿ, ಅಲ್ಲಿಯೇ ಮೂರ್ತಿಗಳನ್ನು ಬಿಟ್ಟು ಓಡಿದರು, ಮೂರ್ತಿಗಳು ಆ ಸ್ಥಳದಲ್ಲೇ ತಳವೂರಿದವು.

ಕಾಮಾಕ್ಷೀ ದೇವಾಲಯದ ಗರ್ಭ ಗುಡಿಯ ಮಧ್ಯದಲ್ಲಿ ಪ್ರಸಾದ ಮೂರ್ತಿ, ಶ್ರೀಶಾಂತದುರ್ಗ, ಶ್ರೀಬೇತಾಳ, ಕಾಲಭೈರವ, ಶ್ರೀರಾಮೇಶ್ವರ, ಶ್ರೀ ಲಕ್ಷ್ಮೀನಾರಾಯಣ, ಶ್ರೀಗ್ರಾಮಪುರುಷ ಮುಂತಾದ ದೇವ ದೇವತೆಗಳಿವೆ.

ಇಲ್ಲಿ ನಿತ್ಯ ನೈಮಿತ್ತಿಕ ತ್ರಿಕಾಲ ಪೂಜೆ – ಅಭಿಷೇಕಾದಿಗಳು ತಪ್ಪದೆ ನಡೆಯುತ್ತವೆ. ನವರಾತ್ರಿಯ ಹತ್ತು ದಿನಗಳ ಉತ್ಸವ ತುಂಬ ವಿಜೃಂಭಣೆಯಿಂದ ನಡೆಯುತ್ತವೆ. ಕೀರ್ತನೆ, ಭಜನೆಗಳಿರುತ್ತವೆ. ಮಹಾಶಿವರಾತ್ರಿಯಿಂದ ಫಾಲ್ಗುಣ ಶುದ್ಧ ದಶಮಿಯವರೆಗೆ ನಡೆಯುವ ಇಲ್ಲಿಯ ಜಾತ್ರೋತ್ಸವವು ರಥೋತ್ಸವ, ಶಿಬಿರೋತ್ಸವ ನಾಟಕಾದಿ ಮನೋರಂಜನೆಯ ಕಾರ್ಯಕ್ರಮಗಳಿಂದ ಜನದಟ್ಟಣೆಯ ಅಪೂರ್ವ ವೈಭವದಿಂದ ಕೂಡಿರುತ್ತದೆ. ಭಾರತಾದ್ಯಂತ ಭಕ್ತಾದಿಗಳು ಪಾಲುಗೊಳ್ಳುತ್ತಾರೆ.

ದೇವಾಲಯದಲ್ಲಿ ಪ್ರತಿನಿತ್ಯ 5 ಗಂಟೆಗೆ ನಗಾರಿ ಬಾರಿಸಲ್ಪಡುತ್ತದೆ. ಪೂಜೆ, ತ್ರಿಕಾಲ ಅಭಿಷೇಕ, ಪಲ್ಲಕ್ಕಿ ಉತ್ಸವ ಜರುಗುತ್ತವೆ. ಪ್ರಸಾದ ಹಂಚಲಾಗುತ್ತದೆ. ಶ್ರೀದೇವಿಗೆ "ಪ್ರಸಾದ" ಕೇಳುವ ವಾಡಿಕೆ ರೂಢಿಯಲ್ಲಿದೆ. ಹರಕೆಗಳನ್ನು ಹೊತ್ತವರು ತಪ್ಪದೇ ತಂದು ಮುಟ್ಟಿಸುತ್ತಾರೆ.

ಈ ದೇವಿಯೇ ಮೂಲ ಆದಿಮಾಯೆಯ ಸ್ವರೂಪವಾಗಿದ್ದು, ಅವಳು ಸರ್ವಸಮರ್ಥಳೂ, ಕೃಪಾಳುವೂ, ಸರ್ವಾಂತರ್ಯಾಮಿಯೂ ಆಗಿರುವಳೆಂಬ ಅಚಲ ಶ್ರದ್ಧೆ ಆರಾಧಕರಲ್ಲಿ ಕಾಣುತ್ತೇವೆ. ದೇವ ಭೂಮಿಯಾದ "ಗೋವೆ" ಯ ಪ್ರಸಿದ್ಧ ದೇವಾಲಯ "ಶ್ರೀಕಾಮಾಕ್ಷೀ ಮಂದಿರ" ವು ಅವಶ್ಯ ನೋಡಬೇಕಾದ ದೇವಾಲಯವಾಗಿದ್ದು, ತನ್ನ ಪವಾಡಗಳಿಂದ ಪ್ರಸಿದ್ಧಿ ಪಡೆದ ಶ್ರೀಕಾಮಾಕ್ಷಿ ದೇವಿಯು ಭಕ್ತರ ಹೃದಯ ಮಂದಿರದಲ್ಲಿ ನೆಲೆಯೂರಿದ್ದಾಳೆ.

ಸರ್ವ ಮಂಗಲ ಮಾಂಗಲ್ಯೇ
ಶಿವೇ ಸರ್ವಾರ್ಥ ಸಾಧಕೇ ।
ಶರಣ್ಯೇ ತ್ರ್ಯಂಬಕೇ ದೇವಿ
ನಾರಾಯಣೀ ನಮೋಸ್ತುತೇ ॥ ೧ ॥

ಸರ್ವ ಸ್ವರೂಪೇ ಸರ್ವೇಶೇ
ಸರ್ವ ಶಕ್ತಿ ಸಮನ್ವಿತೇ ।
ಭಯೇಭ್ಯಸ್ತ್ರಾಹಿನೋ ದೇವಿ
ದುರ್ಗೇ ದೇವಿ ನಮೋಸ್ತುತೇ ॥ ೨ ॥

ಶರಣಾಗತ ದೀನಾರ್ತ
ಪರಿತ್ರಾಣ ಪರಾಯಣೇ
ಸರ್ವಸ್ಯಾರ್ತಿ ಹರೇ ದೇವಿ
ನಾರಾಯಣೀ ನಮೋಸ್ತುತೇ ॥ ೩ ॥

(14ನೇ ಪುಟದಿಂದ)

ವನ್ನು ಬ್ರಹ್ಮ ವಿಷಯಕವಾಗಿ ತಿಳಿದವನಾಗಿ, ಮಹರ್ಷಿಗಳ ಬಳಿಗೆ ಬಂದು ವಿಷಯ ತಿಳಿಸಿದಾಗ ಅವರು ಬಹು ಸಂತೋಷದಿಂದ ಪೂರ್ಣಬ್ರಹ್ಮ ವಿದ್ಯೆಯನ್ನು ಸತ್ಯಕಾಮನಿಗೆ ಉಪದೇಶಿಸಿದರು. ಈ ಪ್ರಸಂಗದಲ್ಲಿ ಗುರುಶಿಷ್ಯನಿಗೆ ಬ್ರಹ್ಮವಿದ್ಯಾ ಬೋಧನೆ ಮಾಡುವ ಅದ್ಭುತ ವಿಧಾನವಿದೆ. ಶ್ರದ್ಧಾ ಭಕ್ತಿಗಳಿಂದ ಬ್ರಹ್ಮತತ್ತ್ವವನ್ನು ತಿಳಿಯಲು ಅನೇಕ ಕಾಲ ಕಾತರನಾಗಿ ಕಾದು ಗುರುವಿನಿಂದ ಅಪೇಕ್ಷಿತ ವಿದ್ಯೆಯನ್ನು ಪಡೆಯುತ್ತಾನೆ. ಗುರು ಪ್ರತ್ಯಕ್ಷವಾಗಿ ಶಿಷ್ಯನಿಗೆ ಏನನ್ನೂ ಬೋಧಿಸದೇ ಇದ್ದಾಗ್ಯೂ ಪರೋಕ್ಷವಾಗಿ ಬ್ರಹ್ಮಜ್ಞಾನ ಅವನಲ್ಲಿ ಉಂಟಾಗುವಂತಹ ವಾತಾವರಣವನ್ನು ಕಲ್ಪಿಸುವ ನವ್ಯರೀತಿ ಈ ಕಥೆಯಲ್ಲಿದೆ. ಪೂರ್ಣಬ್ರಹ್ಮ ವಿದ್ಯೆಯನ್ನು ಮಹರ್ಷಿಗಳಿಂದ ಆಮೇಲೆ ಕೇಳಿ ತೃಪ್ತನಾಗುತ್ತಾನೆ.

ಬ್ರಹ್ಮವಿದ್ಯೆಯೇ ಅಲ್ಲದೇ ಮಿಕ್ಕ ಅನೇಕ ವಿದ್ಯೆಗಳನ್ನು, ಗುರುಗಳಲ್ಲಿ ಶ್ರದ್ಧೆಯಿಂದ ಕಲಿತ ಅನೇಕ ಆದರ್ಶ ಶಿಷ್ಯರ ಚರಿತ್ರೆಗಳಲ್ಲಿ ಕೆಲವನ್ನು ಇಲ್ಲಿ ಸಂಗ್ರಹಿಸಿಕೊಡಲಾಗಿದೆ.

ಉತ್ತಂಕ ಅಥವಾ ಉದಂಕ ಮತ್ತು ಬೈದ ಮಹರ್ಷಿಗಳು :— ಇವರ ಚರಿತ್ರೆಯನ್ನು ನಾವು ಮಹಾಭಾರತದ ಆದಿಪರ್ವದಲ್ಲಿ ಕಾಣಬಹುದು. ಬೈದ ಮಹರ್ಷಿಗಳಲ್ಲಿ ಸಕಲ ವಿದ್ಯೆಗಳನ್ನೂ ಕಲಿತು, ಗುರುದಕ್ಷಿಣೆಯಾಗಿ ಪೌಷ್ಯನೆಂಬ ರಾಜನ ರಾಣಿ ಧರಿಸಿದ್ದ ಕುಂಡಲಗಳನ್ನು ಬೇಡಿ ತೆಗೆದುಕೊಂಡು ಬರುವಾಗ, ತಕ್ಷಕನೆಂಬ ನಾಗ ಅದನ್ನು ಅಪಹರಿಸಿಕೊಂಡು ಹೋದಾಗ ಧೈರ್ಯಗೆಡದೆ ಪಾತಾಳ ಲೋಕಕ್ಕೆ ಹೋಗಿ ನಾಗರಾಜನನ್ನು ಸ್ತುತಿಸಿ ಕುಂಡಲಗಳನ್ನು ಪುನಃ ಪಡೆದು ಗುರುಗಳಿಗೆ ಸಮರ್ಪಿಸುತ್ತಾನೆ.

ಉದಂಕ – ಗೌತಮಮಹರ್ಷಿ :— ಇವರ ಚರಿತ್ರೆಯನ್ನು ಮಹಾಭಾರತ ಅಶ್ವಮೇಧ ಪರ್ವದಲ್ಲಿ ಕಾಣಬಹುದು. ಉದಂಕನೆಂಬ ಶಿಷ್ಯನು ಗೌತಮ ಮಹರ್ಷಿಗಳ ಅಡಿ ದಾವರೆಯಲ್ಲಿ ಕುಳಿತು ಶ್ರದ್ಧೆಯಿಂದ ವಿದ್ಯೆಗಳನ್ನು ಪಡೆದು ಕಡೆಗೆ ಗುರುದಕ್ಷಿಣೆಯಾಗಿ ಸೂರ್ಯವಂಶದ ಸುದಾಸನ ಪತ್ನಿ ಮದವತಿಯು ಧರಿಸಿದ್ದ ಕುಂಡಲಗಳನ್ನು ಬೇಡಿ ಪಡೆದು ಅವುಗಳನ್ನು ಗುರುಪತ್ನಿಯಾದ ಅಹಲ್ಯೆಗೆ ಅರ್ಪಿಸಿದನು.

ಉದ್ದಾಲಕ–ಧೌಮ್ಯಮುನಿ :— ಉದ್ದಾಲಕನು ಧೌಮ್ಯ ಮುನಿಗಳ ಆಶ್ರಮದಲ್ಲಿ ವಿದ್ಯಾಭ್ಯಾಸ ಮಾಡುತ್ತಿದ್ದಾಗ, ಒಂದು ಸಲ ಗುರುವಿನ ಆಜ್ಞೆಯಂತೆ, ಅವರ ಗದ್ದೆಯಲ್ಲಿ ನಿಲ್ಲದೇ ಹರಿದು ಹೋಗುತ್ತಿದ್ದ ನೀರನ್ನು ಅಡ್ಡಗಟ್ಟಲು ಹೋಗಿ, ಎಷ್ಟು ಯತ್ನಿಸಿದರೂ ನೀರನ್ನು ತಡೆಗಟ್ಟಲಾಗದೇ ತಾನೇ ಪ್ರವಾಹಕ್ಕೆ ಅಡ್ಡಲಾಗಿ ಮಲಗಿಬಿಟ್ಟ. ಆಶ್ರಮಕ್ಕೆ ಎಷ್ಟು ಹೊತ್ತಾದರೂ ಬಾರದೇ ಇದ್ದ ಶಿಷ್ಯನನ್ನು ಕಾಣಲು ಗದ್ದೆಯ ಬಳಿಗೆ ಧೌಮ್ಯ ಮಹರ್ಷಿಗಳು ಧಾವಿಸಿ ಬಂದು, ಶಿಷ್ಯನನ್ನು ಕಾಣದೇ ಪ್ರೀತಿ ವಾತ್ಸಲ್ಯಗಳಿಂದ ಅವನ ಹೆಸರು ಹಿಡಿದು ಕೂಗಿದಾಗ ನೀರನ್ನು ಭೇದಿಸಿಕೊಂಡು ಎದ್ದುಬಂದ ಆ ಶಿಷ್ಯನನ್ನು ಮುನಿಗಳು ಉದ್ದಾಲಕನೆಂದೇ ಕರೆದು ಆಶೀರ್ವದಿಸಿ ಅನುಗ್ರಹಿಸಿದರು. ಈ ಚರಿತ್ರೆಯನ್ನು ಮಹಾಭಾರತದ ಆದಿಪರ್ವದಲ್ಲಿ ಕಾಣಬಹುದಾಗಿದೆ. ಈತನೇ ಹೆಸರಾಂತ ಅಷ್ಟಾವಕ್ರಮಹರ್ಷಿಗಳ ತಾಯಿಯಾದ ಸುಜಾತೆಯ ತಂದೆ.

ಕೃಷ್ಣ – ಸಾಂದೀಪಿನೀ ಮುನಿ :— ಶ್ರೀ ಮನ್ಮಹಾಭಾರತದ ಸಭಾಪರ್ವದಲ್ಲೂ, ಭಾಗವತದ ದಶಮಸ್ಕಂಧದಲ್ಲೂ ಮತ್ತು ವಿಷ್ಣು ಪುರಾಣದಲ್ಲೂ ಇವರ ಚರಿತ್ರೆ ಉಕ್ತವಾಗಿದೆ. ಅವಂತೀಪುರವಾಸಿಯಾದ ಸಾಂದೀಪಿನೀ ಎಂಬ ವಿದ್ವಾಂಸರಲ್ಲಿ ಬಲರಾಮ, ಶ್ರೀಕೃಷ್ಣ ಮತ್ತು ಸುದಾಮರು ವಿದ್ಯಾಭ್ಯಾಸಮಾಡಿದರು. ವಿದ್ಯಾಭ್ಯಾಸ ಮುಗಿದ ಮೇಲೆ, ತಮ್ಮ ಗುರುವಿನ ಆಜ್ಞೆ ಮತ್ತು ಅಪೇಕ್ಷೆಯಂತೆ, ಅವರಿಗೆ ದಕ್ಷಿಣೆ ರೂಪದಲ್ಲಿ, ಹಿಂದೆ ಪ್ರಭಾಸ ಕ್ಷೇತ್ರದಲ್ಲಿ ಕಳೆದು ಹೋಗಿದ್ದ ಅವರ ಮಗನನ್ನು ಪುನಃ ಹುಡುಕಿ ಕರೆತಂದು ಕೊಟ್ಟ. ಇಂತಹ ಗುರುದಕ್ಷಿಣೆ ಅವತಾರ ಪುರುಷನಾದ ಶ್ರೀಕೃಷ್ಣನಿಗೊಬ್ಬನಿಗೆ ಸಾಧ್ಯವಾಗಿತ್ತು.

## ಇನ್ನೂ ತಿಳಿದಿಲ್ಲ!

ತನ್ನ ನೆಂಳಿಗೆ ತಾನೇ ಹೆಜ್ಜೆ ಹಾಕಿ ಅಳೆಯುವ
ತನ್ನ ಹೆಗಲನ್ನು ತಾನೇ ಏರಲು ಬಯಸುವ
ಗಾಳಿಯನ್ನು ಗುದ್ದಿ ಮೈ ಕೈ ನೋಯಿಸಿಕೊಂಬ
ಮಳಲಿನಿಂದ ಎಣ್ಣೆಯನ್ನು ಹಿಂಡಿಲೆಳಸುವ
ನೀರನ್ನು ಕಡೆದು ಬೆಣ್ಣೆಯನ್ನು ಪಡೆಯಲಾಶಿಸುವ
ಬಂಜೆಗೋವಿಗೆ ಶುಶ್ರೂಷೆ ಗೈದು ಹಯನನ್ನಾಗಿಸುವ
ಕೌಂಗಿನಿಂದ ತೆಂಗಿನಫಲ ಪಡೆಯುವಾಸೆ ಇರಿಸಿದ
ನೀರನ್ನು ಮೇಲೆ ಹರಿಯಿಸುವ, ಬೆಂಕಿಯನ್ನು ತಣ್ಣಗಾಗಿಸುವ
ಈ ಎಲ್ಲ ಎಲ್ಲೆಯಿಲ್ಲದ ಆಸೆ ಆಮಿಷಗಳಿಂದ
ಸಂಶೋಧನೆಯ ತುಂಬು ಹಂಬಲದಿಂದ
ಬಳಲಿದ್ದೇನೆ, ಸೋತಿದ್ದೇನೆ, ಪೇಚಾಡುತ್ತಿದ್ದೇನೆ
ಆದರೆ, ನನ್ನ ಉದ್ಯಮ, ಶ್ರಮಗಳೇ
ಸರಿದಾರಿಯನ್ನು ತುಳಿದಿಲ್ಲ ಎನ್ನುವ ವಿವೇಕ
ಇನ್ನೂ ಮೂಡಿಲ್ಲ; ತಿಳಿವ ಮನವನ್ನೂ ಮಾಡಿಲ್ಲ!

—ಕೆ. ಸುಬ್ರಮಣ್ಯ ಭಟ್ಟ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು.

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.
* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.
* ಸರತಿಯ ಸಾಲಿನ ಕೋಣೆಗಳಲ್ಲಿ ಕಾಫಿಬೋರ್ಡ್‌ನವರ ಅಲ್ಪಾಹಾರ ಸೌಲಭ್ಯ.
* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.
* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು
* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.
* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.
* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್ ಪ್ರದರ್ಶನ, ಭಕ್ತಿ ಸಂಗೀತ
* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ 7-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ. ಗೋವಿಂದ ಪ್ರಸಾದ ಕ್ಯಾಂಟೀನ್,
* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.
* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ. ಹಾಗೂ ಉಚಿತ ಬಸ್ ಸೌಕರ್ಯ.
* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.
* ಪಂಡಾಗಳು, ವಂಚಕರಿಂದ ಯಾತ್ರಿಕರನ್ನು ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.
* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಬ್ಬ ಅಧಿಕಾರಿ ಮತ್ತು ಸಿಬ್ಬಂದಿ.

## ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.

ಗಮನಿಕೆ : ತಿರುಮಲೆಯಲ್ಲಿ ಅಂಚೆ ಕಚೇರಿಯಲ್ಲಿ ರಾತ್ರಿ 8-30 ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೇ ಪ್ರಧಾನ ಅಂಚೆ ಕಚೇರಿಯು ರಾತ್ರಿ 10—30 ರಿಂದ 1—00 ಗಂಟೆಯವರೆಗೆ ಕೆಲಸಮಾಡುತ್ತದೆ.

# ಆಂಜನೇಯನ ಹೆಸರಿನಲ್ಲಿ ಅಪೂರ್ವ ಕರಗ

ಜಾತ್ರೆಗಳಲ್ಲಿ ಅಗ್ನಿ ತುಳಿಯುವ ಸಂಪ್ರದಾಯ ಇರುವುದನ್ನು ನಾವು ಕಾಣುತ್ತೇವೆ. ಆದರೆ ಆಂಜನೇಯಸ್ವಾಮಿಯ ಸಮ್ಮುಖದಲ್ಲಿ ವೈಷ್ಣವ ಪದ್ಧತಿ ಅನುಸಾರವಾಗಿ ಅಗ್ನಿ ತುಳಿಯುವುದು ಅತಿ ವಿರಳ.

ಪ್ರಾಗೈತಿಹಾಸಿಕ ಕಾಲದಿಂದ ಇಂದಿನ ವರೆಗೆ ಮಾತೃಪೂಜಾ ಪದ್ಧತಿಯು ಜನಜೀವದಲ್ಲಿ ಒಂದಿಲ್ಲೊಂದು ರೀತಿಯಲ್ಲಿ ನಮ್ಮಲ್ಲಿ ಉಳಿದುಕೊಂಡು ಬಂದಿದೆ. ಇವನ್ನು ಸೈಂಧವ ಸಂಸ್ಕೃತಿ ಎಂದು ಕರೆಯುವುದೂ ಉಂಟು. ಜೀವ ಜಗತ್ತಿನ ಇರುವಿಕೆ, ಇಲ್ಲದಿರುವಿಕೆ, ಹಾಗೂ ಉಳಿಯುವಿಕೆಗಳಿಗೆಲ್ಲ ಒಂದು ನಿಯಾಮಕ ಶಕ್ತಿ ಎಂಬುದಿದೆ. ಆ ಶಕ್ತಿಯೇ ಮಾಯಾ ಎಂಬುದು ಕೆಲವರ ಅಭಿಪ್ರಾಯ ಬ್ರಹ್ಮ, ವಿಷ್ಣು, ಮಹೇಶ್ವರರ ರೂಪಗುಣಾದರ್ಶಗಳಿಗನುಗುಣವಾಗಿ ಸತ್ತ್ವ ರಜ, ತಮ ಎಂಬ ಪ್ರಭೇದಗಳು ಕಾಣುವಂತಾಯಿತೆಂಬ ನಂಬಿಕೆಯೂ ಇದೆ. ಮುಂದೆ ಪ್ರಕೃತಿ ಪೂಜಾಹಂತದಲ್ಲಿ ಬ್ರಾಹ್ಮಿ, ಮಹೇಶ್ವರಿ, ವೈಷ್ಣವಿ, ಇಂದ್ರಾಣಿ ಮೊದಲಾದ ಸಪ್ತಮಾತೃಕೆಯರ ರೂಪಗಳನ್ನು ನಾವು ಕಾಣುವಂತಾದುದು ಅಭ್ಯಾಸದಿಂದ ತಿಳಿದು ಬರುತ್ತದೆ.

ನಮ್ಮ ರಾಷ್ಟ್ರವನ್ನಾಳಿದ ಗುಪ್ತರು, ಕದಂಬರು, ರಾಷ್ಟ್ರಕೂಟರು, ಚಾಲುಕ್ಯರು ಮೊದಲಾದ ರಾಜ ಮನೆತನದವರ ಕಾಲದಲ್ಲಿ ಈ ಮಾತೃ ಪೂಜೆಗೆ ವಿಶೇಷ ಮಹತ್ವವನ್ನೀಯಲಾಯಿತೆಂಬುದು ಪ್ರಾಚೀನ ಶಿಲಾವಿಶೇಷಗಳ ಅಭ್ಯಾಸದಿಂದ ವೇದ್ಯವಾಗುತ್ತದೆ, ಹೀಗಿದ್ದರೂ ಮಾತೃಪೂಜಾ ಪದ್ಧತಿಯ ನಿರ್ದಿಷ್ಟವಾದ ಕಾಲಾವಧಿಯನ್ನು ಗುರುತಿಸಿ ಹೇಳುವುದು ಕಷ್ಟ ಸಾಧ್ಯವಾದ ವಿಷಯ, ಋಗ್ವೇದದಲ್ಲಿ ಸ್ತ್ರೀ ದೇವತೆಗಳ ಉಲ್ಲೇಖವು ಕಾಣಸಿಗುತ್ತದೆ. ಆದರೆ ಆ ದೇವತೆಯರನ್ನೇ ಸಪ್ತಮಾತೃಕೆಯರೆಂದು ನಂಬಲು ಬರುವಂತಿಲ್ಲ. ಆದರೆ ಬೃಹತ್ಸಂಹಿತೆಯಲ್ಲಿಯ ಪ್ರಸ್ತಾಪವು ಮಾತ್ರ ಈ ವಿಚಾರವನ್ನು ಸ್ಪಷ್ಟಪಡಿಸುತ್ತದೆ. ವರಾಹ ಪುರಾಣದಲ್ಲಿ ಶಿವನ ಮುಖದಿಂದ ಹುಟ್ಟಿದ ಶಕ್ತಿಯನ್ನು ಯೋಗೀಶ್ವರಿ ಎಂದು ಕರೆದುದುಂಟು, ಇದೇ ಸಂದರ್ಭದಲ್ಲಿ ಅನೇಕ ಈ ದೇವತಾ ಕೂಟವನ್ನು ಪೂಜಿಸಲು ತಾಂತ್ರಿಕ ಸ್ವರೂಪದ ಪದ್ಧತಿ ಇದೆ. ಈ ಶಕ್ತಿಪ್ರಧಾನವಾದ ನೂರೆಂಟು ತೀರ್ಥಕ್ಷೇತ್ರಗಳ ವರ್ಣನೆಯೂ ಇದೆ. ಇವುಗಳ ವ್ಯಾಪ್ತಿ ಅಖಿಲ ಭಾರತ ಮಟ್ಟದಲ್ಲಿದೆ. ಇದರಿಂದಾಗಿ ಒಂದು ಕಾಲದಲ್ಲಿ ಶಕ್ತಿಪೂಜಾವಿಧಾನವು ಭಾರತದಲ್ಲಿ ಎಷ್ಟು ಪ್ರಾಧಾನ್ಯ ಹೊಂದಿತೆಂಬುದನ್ನು ನಾವು ಊಹಿಸಬಹುದಾಗಿದೆ.

ಈ ಪೂಜೆಯಲ್ಲಿ ದಕ್ಷಿಣಾಚಾರ ಹಾಗೂ ವಾಮಾಚಾರಗಳೆಂಬ ಪ್ರಭೇದಗಳಿವೆ. ಅದರಲ್ಲಿ ದಕ್ಷಿಣಾಚಾರ ಪದ್ಧತಿಯು ವೇದ ಪ್ರಣೀತವೆಂದೆನಿಸಿಕೊಳ್ಳುತ್ತದೆ. ವಾಮಾಚಾರ ಪದ್ಧತಿಯು ತಾಮಸ ವೃತ್ತಿಯದೆಂದು ಹೇಳುತ್ತಾರೆ. ಅದು ವೇದಬಾಹಿರವೆಂದೆನಿಸಿಕೊಂಡಿದೆ, ರಾಜಸಪ್ರಧಾನವಾದ ಈ ಪದ್ಧತಿಯಲ್ಲಿ ಶಕ್ತಿಯೇ ಶಿವನಿಗೆ ಕಾರಣೀಭೂತಳೆಂದೆನಿಸಿಕೊಳ್ಳುತ್ತಾಳೆ. ಶಿವನು ತಂದೆಯಾದರೆ ಶಕ್ತಿ ಆತನ ತಾಯಿ ಎಂಬ ಭಾವನೆ ಇದೆ. ಅದರಲ್ಲಿ ಕೆಲವರು ಶಕ್ತಿ ಎಂಬುದು ಒಂದೇ; ಬೆಂಕಿಯಲ್ಲಿ ಕಾವು ಹೇಗೊ ಹಾಗೆ ಶಿವನಲ್ಲಿ ಶಕ್ತಿ ಎಂಬುದು ಅವಿನಾಭಾವದಿಂದ ಕೂಡಿದೆ ಎಂದು ಹೇಳುತ್ತಾರೆ. ಇವರು ಶಿವನಿಗೆ ಶಕ್ತಿ, ಸೂರ್ಯನಿಗೆ ಕಿರಣಗಳಿದ್ದಂತೆ ಚಂದ್ರನ ಬೆಳದಿಂಗಳಿದ್ದಂತೆ ಎಂದು ಭಾವಿಸುವವರಿದ್ದಾರೆ ಈ ವಿಚಾರಗಳೆಲ್ಲ ಋಗ್ವೇದದ ರಾತ್ರೀ ಸೂಕ್ತದಲ್ಲಿ. ಬ್ರಹ್ಮಚೋಪನಿಷತ್ತಿನಲ್ಲಿ, ಕೇನೋಪನಿಷತ್ತಿನಲ್ಲಿ, ತೈತ್ತಿರೀಯ ಬ್ರಾಹ್ಮಣದಲ್ಲಿ ಅರಣ್ಯಕ ಭಾಗದಲ್ಲಿ ನಮಗೆ ನೋಡಲು ಸಿಗುತ್ತವೆ. ಅನೇಕ ಸಲ ಈ ಶಕ್ತಿ ಮಾತೆಯನ್ನು ಜಗನ್ಮಾತೆ ಎಂದು ಸಂಬೋಧಿಸಿದುದನ್ನು ನಾವು ನೋಡುತ್ತೇವೆ. ಶಕ್ತಿ ದೇವತೆಯರು ಸೃಷ್ಟಿಗೊಂಡರೆಂದು ಹೇಳಿರುವುದು ಉಂಟು. ಮಾರ್ಕಂಡೇಯ ಪುರಾಣದಲ್ಲಿ ಬೀಜಾಸುರನ ಸಂಹಾರಕ್ಕಾಗಿ ಅಂಬಿಕೆಯೊಡನೆ ಸಂಚರಿಸುವಂತಹ ಸಪ್ತ ಮಾತೃಕೆಯರು ಮೈದಳೆದರೆಂದು ಹೇಳಲಾಗಿದೆ.

ಬಾದಾಮಿಯ ಚಾಲುಕ್ಯರು 450 ರಿಂದ 755 ರ ಕಾಲಾವಧಿಯಲ್ಲಿ ನಿರ್ಮಿಸಿದ ಶೈವ ದೇವಾಲಯಗಳಲ್ಲಿ ಈ ಸಪ್ತಮಾತೃಕಾ ಕೂಟವಿದ್ದುದನ್ನು ನಾವು ಇಂದಿಗೂ ನೋಡಬಹುದಾಗಿದೆ. ಇಂಥ ಕೂಟಗಳು, ಇಟಗಿ, ಕುಕನೂರು, ಹಗರಟಗಿ, ಹಾವೇರಿ ಮೊದಲಾದ ಸ್ಥಳಗಳಲ್ಲಿವೆ. ಕೋಲಾರಮ್ಮನ ದೇವಾಲಯವೂ ಸಹ ಇದಕ್ಕೆ ಒಂದು ನಿದರ್ಶನವೆನಿಸಿದೆ. ಇಷ್ಟೆಲ್ಲ ಹೇಳಿದಾಗಲೂ ಶಕ್ತಿಯ ಈ ಪಾತ್ರವೂ ಸಹ ಒಂದು ಪರಿಮಿತಿ ಗಳಿಸಲಾದುದನ್ನು ತಿಳಿದುಕೊಳ್ಳಬಹುದಾಗಿದೆ.

ಮಹಾಭಾರತದಲ್ಲಿ ಬರುವ ದುರ್ಗಾ ಸ್ತೋತ್ರ ಹರಿವಂಶದಲ್ಲಿಯ ಆರ್ಯಾಸ್ತವ ಮೊದಲಾದ ಭಾಗಗಳಲ್ಲಿ ಶಕ್ತಿ ದೇವತೆಯ ಮಹಿಮಾತಿಶಯಗಳ ವರ್ಣನೆಯು ಕಾಣಸಿಗುತ್ತವೆ. ಅಲ್ಲದೆ ಈ ಶಕ್ತಿ ದೇವತೆಗಳು ಆರ್ಯ ಸಂಸ್ಕೃತಿಯ ಪ್ರಭಾವಗೊಂಡದ್ದನ್ನೂ ಸಹ ಕಾಣಬಹುದಾಗಿದೆ. ಕಾಲಾಂತ್ಯದಲ್ಲಿ ಎಲ್ಲಮ್ಮ, ಅಣ್ಣಮ್ಮ, ಅಜ್ಜಮ್ಮ, ಬಂಗಾರಮ್ಮ ಎಂಬ ಹೆಸರುಗಳಿಂದ ಇವಳ ಪೂಜೆ ಬೆಳೆವಂತೆ ತೋರಿ ಬರುತ್ತದೆ, ಈ ಶಕ್ತಿ ದೇವತೆ ನಮ್ಮ ಗ್ರಾಮಜೀವನದಲ್ಲಿ ಪ್ರವೇಶ ಮಾಡಿದುದೂ ಸಹ ಚಿತ್ತಾಕರ್ಷಕವಾದ ಅನೇಕ ಘಟನೆಗಳಿಂದ ಕೂಡಿದ ಕಥೆಗಳಾಗಿದೆ. ಗ್ರಾಮರಕ್ಷಣೆಗೆ, ರೋಗರುಜಿನಗಳನ್ನು ತಡೆ ಹಿಡಿಯುವ ಪ್ರವೃತ್ತಿಗೆ ಇವರು ಮೂಲಕಾರಣರೆಂಬ ಭಾವನೆಯು

ಶ್ರೀ ಆದ್ಯ ರಾಮಾಚಾರ್ಯ

## ತಿರುಮಲೆ ತಿರುಪತಿ ದೇವಸ್ಥಾನಗಳು

# ದಾನಯೋಜನೆಯಲ್ಲಿ

# ಯಾತ್ರಿಕ ವಸತಿ ಗೃಹಗಳು

ತಿರುಮಲೆಯಲ್ಲಿ ನಿರಂತರ ಹೆಚ್ಚುತ್ತಿರುವ ಯಾತ್ರಿಕರ ಅನುಕೂಲಗಳಿಗಾಗಿ ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತವು ಹೆಚ್ಚಿನ ವಸತಿ ಸೌಕರ್ಯವನ್ನು ಒದಗಿಸಲು ತೀರ್ಮಾನಿಸಿದೆ. ಈ ಬೃಹತ್ ಕಾರ್ಯವನ್ನು ಭಕ್ತರ ಹಾಗೂ ಸೇವಾಕರ್ತರ ಸಕ್ರಿಯ ಸಹಕಾರದಿಂದ ನೆರವೇರಿಸಲು ತಿ.ತಿ.ದೇ. ನಿರ್ಧರಿಸಿದೆ

ಈ ಯೋಜನೆಯ ವಿವರಗಳನ್ನು ಆಸಕ್ತರಿಗಾಗಿ ಈ ಕೆಳಗಿನಂತೆ ನಿರೂಪಿಸಲಾಗಿದೆ.

### ಗರುಡಾದ್ರಿನಗರ ವಸತಿಯೋಜನೆ

ಈ ಯೋಜನೆಯನ್ವಯ ಎರಡು ಅಂತಸ್ತುಗಳ 16 ವಸತಿಗೃಹಗಳನ್ನು (ಪ್ರತಿಯೊಂದು ಅಂತಸ್ತಿನಲ್ಲಿ 4 ಸೂಟ್‌ಗಳಿರುವಂತೆ) ನಿರ್ಮಿಸಲಾಗುವುದು. ಪ್ರತಿಯೊಂದು ಸೂಟ್ ಸಹ 10' × 12' ಗಳಿದ್ದು ಸ್ನಾನ ಶೌಚಾಗಾರಗಳೊಂದಿಗೆ ಹಾಗೂ ಸಾಮಾನ್ಯ ಅಂಗಳ ಜೊತೆಗೆ ಕೂಡಿರುವುದು.

ಒಟ್ಟು 320 ಚದರಡಿ ಪ್ಲಿಂತ್ ವಿಸ್ತೀರ್ಣದ ಪ್ರತಿಸೂಟ್‌ಗಾಗಿ ದಾನ ನೀಡಬೇಕಾದ ಮೊಬಲಗು ರೂ 30,000 ಮಾತ್ರ.

ಒಟ್ಟು 128 ಸೂಟ್‌ಗಳಿರುವ ಈ ಯೋಜನೆಯಲ್ಲಿ ಆಸಕ್ತ ಭಕ್ತರು ಈಗಾಗಲೇ 66 ಸೂಟ್‌ಗಳಿಗಾಗಿ ದಾನಗಳನ್ನು ನೀಡಿದ್ದಾರೆ!

8 ಸೂಟ್‌ಗಳ ಒಂದು ವಸತಿಗೃಹದ ವೆಚ್ಚವಾದ 2.4 ಲಕ್ಷ ರೂಗಳನ್ನಾಗಲೀ, 4 ಸೂಟ್‌ಗಳ ವೆಚ್ಚವಾದ 1.2 ಲಕ್ಷ ರೂಗಳನ್ನಾಗಲೀ ಅಥವಾ ಎರಡು ಸೂಟ್‌ಗಳ ವೆಚ್ಚವಾದ ರೂ 60,000 ಗಳನ್ನಾಗಲೀ ನೀವು ದಾನ ನೀಡಬಹುದು.

### ರಾಮಬಗೀಚಾ ಅತಿಥಿಗೃಹ ಯೋಜನೆ

ತಿರುಮಲೆಯ ದೇವಾಲಯದ ಈಶಾನ್ಯ ಭಾಗದಲ್ಲಿನ ರಾಮ ಬಗೀಚಾದಲ್ಲಿ ಮೂರು ಅತಿಥಿ ಗೃಹಗಳನ್ನು ನಿರ್ಮಿಸಲು ತೀರ್ಮಾನಿಸಲಾಗಿದೆ

ಪ್ರತಿಯೊಂದು ಅತಿಥಿಗೃಹವೂ ಮೂರು ಅಂತಸ್ತುಗಳನ್ನು ಹೊಂದಿದ್ದು, ಪ್ರತಿ ಅಂತಸ್ತಿನಲ್ಲಿ 50 ಸೂಟ್‌ಗಳಿರುತ್ತವೆ. ಪ್ರತಿಯೊಂದು ಸೂಟ್ 14' × 16' ವಿಸ್ತೀರ್ಣವಿದ್ದು ಸ್ನಾನ ಶೌಚ ಗೃಹಗಳು ಇರುತ್ತವೆ. ಪ್ಲಿಂತ್ ವಿಸ್ತೀರ್ಣ ಸುಮಾರು 600 ಚ. ಅಡಿಗಳಾಗಿದ್ದು ಸಾಮಾನ್ಯ ಅಂಗಳವಿರುವುದು. ಪ್ರತಿ ಸೂಟ್‌ನ ನಿರ್ಮಾಣಕ್ಕೆ ತಗಲುವ ದಾನದ ಮೊಬಲಗು ರೂ 60,000 ಮಾತ್ರ.

ತೀರ್ಮಾನಿಸಲಾದ 450 ಸೂಟ್‌ಗಳಲ್ಲಿ ಈಗಾಗಲೇ 37 ಸೂಟ್‌ಗಳಿಗಾಗಿ ದಾನಗಳನ್ನು ಸ್ವೀಕರಿಸಲಾಗಿದೆ!

### ನಿಮ್ಮ ದಾನದ ಪ್ರತಿಯಾಗಿ ದೊರೆಯುವ ಸೌಲಭ್ಯಗಳು ಈ ರೀತಿ ಇವೆ

1. ದಾನಿಗಳ ಹೆಸರಿನ ಫಲಕವನ್ನು ಕಟ್ಟಡದಲ್ಲಿ ಸ್ಥಾಪಿಸಲಾಗುವುದು
2. ಒಂದು ಬಾರಿಗೆ ಹತ್ತು ದಿನಗಳಿಗೆ ಮೀರದಂತೆ ದಾನಿಯು ಒಂದು ವರ್ಷದಲ್ಲಿ 30 ದಿನಗಳ ಕಾಲ ಉಚಿತವಾಗಿ ತಮ್ಮ ದಾನದ ಕಟ್ಟಡದಲ್ಲಿ ತಂಗಬಹುದು.
3. ದಾನಿಯ ಬಂಧುಗಳಿಗೆ ತಿರುಮಲೆಯಲ್ಲಿ ವಸತಿ ನೀಡುವಲ್ಲಿ ಆದ್ಯತೆ ನೀಡಲಾಗುವುದು.
4. ಅಪೇಕ್ಷಿಸಿದಾಗ ದಾನಿಯ ಕಟ್ಟಡ ಖಾಲಿಯಿಲ್ಲದಲ್ಲಿ ಇತರ ಏರ್ಪಾಡುಗಳನ್ನು ಮಾಡಿಕೊಡಲಾಗುವುದು.

ಕೂಡಲೇ ಬರೆಯಿರಿ – ಕಾರ್ಯನಿರ್ವಹಣಾಧಿಕಾರಿ
ತಿ. ತಿ. ದೇ. ತಿರುಪತಿ

ಸಹ ಬೆಳೆದು ಬರುವಂತಾಗಿದೆ. ಎಲ್ಲಿ ವೈಷ್ಣವ ಪ್ರಭಾವವು ಹೆಚ್ಚಾಗಿದೆಯೋ ಅಲ್ಲಿ ಈ ದೇವತೆಯರೂ ಗ್ರಾಮದ ಮಧ್ಯದಲ್ಲಿ ಸ್ಥಳವನ್ನು ಗಿಟ್ಟಿಸಿಕೊಂಡಿದ್ದಾರೆ. ಕೇವಲ ಶಾಕ್ತ ಸಂಪ್ರದಾಯದವಾಗಿದ್ದರೆ ಅಂಥವರಿಗೆ ಗ್ರಾಮವ ಹೊರಭಾಗದಲ್ಲಿರುವ ಕೆರೆ ಕುಂಟೆಗಳ ದಂಡೆಯ ಮೇಲೋ ಇಲ್ಲವೇ ಸ್ಮಶಾನದಲ್ಲಿಯೋ ಗೂಡುಗಳಿರುತ್ತದೆ. ಸ್ಮಶಾನವಾಸಿಯಾದ ದೇವಿಯನ್ನು ಪೂಜಿಸುವವರಿಗೆ ಕಾಪಾಲಿಕರೆಂದು ಕರೆಯುತ್ತಾರೆ.

ಈ ಶಕ್ತಿ ಪೂಜಾ ಕಾಲವು ವರ್ಷಋತುವಿನೊಂದಿಗೆ ಆರಂಭವಾಗುತ್ತವೆ. ಶರದೃತು ಹಾಗೂ ವಸಂತ ದಿನಗಳಲ್ಲಿ ಹಂತ ಹಂತವಾಗಿ ಬೆಳೆಯುತ್ತ ಹೋಗುತ್ತದ್ದೆ, ಶಿವನ ಶಿರೋಭಾಗವನ್ನಲಂಕರಿಸಿದ ಗಂಗೆಗೆ ಇಲ್ಲಿ ಪ್ರಥಮ ಸ್ಥಾನವಿದೆ. ಪೂರ್ಣಕುಂಭದಲ್ಲಿ ಗಂಗೆಯನ್ನು ತುಂಬಿಕೊಂಡು ಸವದತ್ತಿಯ ಎಲ್ಲಮ್ಮನಿಗೋ ಅಥವಾ ಹುರಿಗೆಮ್ಮನಿಗೋ ಹತ್ತಾರು ಮೈಲು ನಡೆದುಕೊಂಡು ಬರುವ ಜೋಗಿಯರ ತಂಡವನ್ನೇ ನಾವು ಕಾಣಬಹುದು, ಅವರು ನಿರಾಯಾಸವಾಗಿ ತಲೆಯ ಮೇಲಿ ಗಂಗೆ ತುಂಬಿದ ಬಿಂದಿಗೆಯನ್ನಿಟ್ಟುಕೊಂಡು ಉಧೋ ಉಧೋ ಎಂದು ಎಲ್ಲಮ್ಮನನ್ನು ಹರಸಿಕೊಳುತ್ತ ಸಾಗುವ ಪಥಿಕರನ್ನು ಉತ್ತರ ಕರ್ನಾಟಕದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಕಾಣಬಹುದು.

ಕರ್ನಾಟಕದ ರಾಜಧಾನಿಯಾದ ಬೆಂಗಳೂರಿನಲ್ಲಿ ಧರ್ಮರಾಯ ದೇವಸ್ಥಾನದವರು ಒಂದು ಹುಣ್ಣಿಮೆಯ ದಿನ ಈ ಶಕ್ತಿ ದೇವತೆಯ ಪೂಜೆಯನ್ನಿಟ್ಟುಕೊಳ್ಳುತ್ತಾರೆ.ಪೂರ್ಣಕುಂಭದ ಗಂಗೆಗೆ ಹೂವಿನಲಂಕಾರಮಾಡಿ ಅರ್ಚಕ ವರ್ಗದವರು ಅವನ್ನು ತಲೆಯ ಮೇಲಿಟ್ಟುಕೊಂಡು ನಾಲ್ಕು ಬೀದಿಗಳಲ್ಲಿ ಸಂಚರಿಸಿ ದೇವಾಲಯಗಳಿಗೆ ಭೇಟಿಕೊಟ್ಟು ಬರುತ್ತಾರೆ. ಈ ಹಬ್ಬವನ್ನು ಕರಗದ ಹಬ್ಬ ಎಂದು ಕರೆಯುವ ಸಂಪ್ರದಾಯವಿದೆ, ಬೆಂಗಳೂರಿನಲ್ಲಿ ನಡೆಯುವ ಈ ಉತ್ಸವದ ಪ್ರತೀಕವಾಗಿ ಹೊಸಕೋಟೆ ಹಾಗೂ ಕೋಲಾರ, ಮುಳಬಾಗಿಲು ಮೊದಲಾದ ಭಾಗಗಳಲ್ಲಿಯೂ ಸಹ ಇಂಥ ಉತ್ಸವಗಳನ್ನು ಸ್ಥಳ ನಿವಾಸಿಗಳು ಆಚರಿಸುವ ಸಂಪ್ರದಾಯವಿಟ್ಟುಕೊಂಡು ಬಂದಿದ್ದಾರೆ. ಈ ಶಕ್ತಿ ಪೂಜೆಯಲ್ಲಿ ವೈಷ್ಣವ ಸಂಪ್ರದಾಯದ ಉತ್ಸವವನ್ನು ಈಗ ಗಮನಿಸಬಹುದು ಗ್ರಾಮದೇವಸಾದ ಆಂಜನೇಯನ ಹೆಸರಿನಲ್ಲಿ ಈ ಉತ್ಸವಗಳ ಆಚರಣೆಯಾಗುತ್ತದೆ. ಮೊದಲಗಟ್ಟೆಯ ಆಂಜನೇಯನ ಸನ್ನಿಧಾನದಲ್ಲಿ ಈ ಉತ್ಸವ ಕಾಲದಲ್ಲಿ ಅಗ್ನಿ ತುಳಿಯುವ ಸಂಪ್ರದಾಯವಿದೆ ಎಂದು ತಿಳಿದು ಬರುತ್ತದೆ. ಅದನ್ನು ಬಿಟ್ಟರೆ ಕೋಲಾರ ಜಿಲ್ಲೆಗೆ ಸಮೀಪವರ್ತಿಯಾದ ಮಾರಾಂಡಹಳ್ಳಿ ಆಂಜನೇಯನ ಸಮ್ಮುಖದಲ್ಲಿ ಹೀಗೆ ಅಗ್ನಿ ತುಳಿಯುವ ಸಂಪ್ರದಾಯವಿದೆ. ಈ ಕಾರ್ಯಕ್ರಮವನ್ನು ಮಾಧ್ವ ಸಂಪ್ರದಾಯದ ಶ್ರೀಪಾದರಾಜ ಮಠನ ಶಿಷ್ಯವರ್ಗಕ್ಕೆ ಸೇರಿದ ಪಿ. ಆರ್. ನಾಗರಾಜಾಚಾರ್ಯರೆಂಬ ಹೆಸರಿನ ತರುಣ ನಡೆಸಿಕೊಡುತ್ತ ಬಂದಿದ್ದಾರೆ.

ಇತ್ತೀಚೆಗೆ ನಾನು ಈ ತರುಣನನ್ನು ಭೇಟಿಯಾಗಿದ್ದೆ. ಇವರು ಒಂದುಸಲ ತಾವು ಹೈಸ್ಕೂಲಿನಲ್ಲಿ ವಿದ್ಯಾರ್ಥಿಯಾಗಿದ್ದಾಗ ಫ್ಯಾನ್ಸಿಡ್ರೆಸ್‌ನಲ್ಲಿ ಈ ಕರಗದ ವೇಷವನ್ನು ಧರಿಸಿದರಂತೆ. ಮೂರನೆವರುಷದಿಂದ ಕೋಲಾರದಿಂದ ಮೂರು ಮೈಲಿನ ಮೇಲಿರುವ ಮಾರಾಂಡಹಳ್ಳಿಯ ಆಂಜನೇಯನ ಉತ್ಸವ ಕಾಲದಲ್ಲಿ ತಲೆಯ ಮೇಲೆ ಕರಗವನ್ನಿಟ್ಟುಕೊಂಡು ಅಗ್ನಿಯನ್ನು ತುಳಿದರಂತೆ. ಅಂದಿನಿಂದ ಸುಮಾರು ಹನ್ನೆರಡು ವರುಷಗಳ ಕಾಲ ತಪ್ಪದೇ ಈ ಸೇವೆಯನ್ನು ನಡೆಸಿ ಬರುತ್ತಿರುವುದಾಗಿ ಅವರು ತಿಳಿಸಿದರು, ವೈಶಾಖ ಶುದ್ಧ ಹುಣ್ಣಿಮೆಯ ದಿನ ಈ ಕಾರ್ಯಕ್ರಮವು ನಡೆಯುತ್ತದೆ. ಅವತ್ತು ಅವರು ಪರಿಪೂರ್ಣ ಉಪವಾಸ ವ್ರತವನ್ನು ಆಚರಿಸುವರಂತೆ. ಚಾಮುಂಡೇಶ್ವರಿಯ ಹೋಮ ಹವನಾದಿ ಕಾರ್ಯಕ್ರಮಗಳು ನಡೆದಾಗ ವ್ರತಬಂಧಿತರಾದ ಇವರು ಮೊದಲು ಆ ಕಾರ್ಯಕ್ರಮದಲ್ಲ ಭಾಗವಹಿಸುತ್ತಾರೆ. ಶಕ್ತಿ ದೇವತೆಯಾದ ಚಾಮುಂಡಿಯ ಹೋಮ ಹವನಾದಿ ಕಾರ್ಯಗಳು ಮುಗಿದ ನಂತರ ತುಂಬಿದ ಕಲಶ ದೇವತೆಯನ್ನು ಆಹ್ವಾನಮಾಡಿ ಪೂಜಿಸುತ್ತಾರೆ, ಅರಿಷಿಣವನ್ನು ಬಳಿದ ಹೊಸ ಬಟ್ಟೆಗಳನ್ನು ಧರಿಸಿ ಕಂಕಣಬದ್ಧರಾಗುತ್ತಾರೆ. ಈ ಎಲ್ಲ ಕಾರ್ಯಕ್ರಮಗಳೂ ಪೂರೈಸಬೇಕಾದಲ್ಲಿ ಬೆಳಗಿನ ಆರೂವರೆ ಗಂಟೆಯಾಗುತ್ತದೆ. ನಂತರ ಪುರೋಹಿತರು ಅಗ್ನಿದೇವತೆಯ ಪೂಜೆಯನ್ನು ಶಾಸ್ತ್ರೋಕ್ತವಾಗಿ ಪೂರೈಸಿದ ನಂತರ ಶಕ್ತ್ಯಾಯುಧ ಧರಿಸಿ ಪೂರ್ಣಕುಂಭವನ್ನು ತಲೆಯ ಮೇಲಿಟ್ಟುಕೊಂಡು ಅಗ್ನಿಕುಂಡಕ್ಕಿಳಿಯುತ್ತಾರೆ. ನಾಲ್ವತ್ತು ವರ್ಷ ವಯಸ್ಸಾಗಿರುವ ಈ ತರುಣನನ್ನು ಮುಂದಿಟ್ಟುಕೊಂಡು ಇನ್ನುಳಿದ ಭಕ್ತಾದಿಗಳೂ ಸಹ ಆತನ ಹಿಂದೆ ಅಗ್ನಿಕುಂಡದಲ್ಲಿ ಕಾಲಿಡುತ್ತಾರೆ. ಶ್ರೀರಾಮಚಂದ್ರನ ದಿವ್ಯ ಪಾದ ಪಾದಗಳನ್ನು ಸ್ಮರಣೆ ಮಾಡುತ್ತಾ ಎಲ್ಲರೂ ಆ ಅಗ್ನಿಕುಂಡದಿಂದ ಹೊರಬರುತ್ತಾರೆ. ಅನಂತರದಲ್ಲಿ ಶ್ರೀರಾಮಚಂದ್ರನಿಗೆ ಕಲ್ಯಾಣೋತ್ಸವವು ನಡೆಯುತ್ತದೆ. ಸಾವಿರಾರು ಜನರಿಗೆ ಅನ್ನ ಸಂತರ್ಪಣೆಯನ್ನು ಮಾಡುತ್ತಾರೆ. ಇದೊಂದು ಅಪರೂಪದ ಉತ್ಸವ ಎಂದೆನಿಸಿಕೊಂಡಿದೆ. ಸುತ್ತಲಿನ ಜನರಷ್ಟೆ ಅಲ್ಲದೆ ಬೆಂಗಳೂರು, ಮೈಸೂರು ಮೊದಲಾದ ಭಾಗಗಳಿಂದ ಭಕ್ತರು ಈ ಉತ್ಸವದಲ್ಲಿ ಪಾಲ್ಗೊಳ್ಳುವ ಸಂಪ್ರದಾಯವಿದೆ.

ನಾಗರಾಜಾಚಾರ್ಯ ಮುಳುಬಾಗಿಲು ನಿವಾಸಿಗಳಾಗಿದ್ದು ಮಧ್ಯಮ ವರ್ಗದ ಕುಟುಂಬಕ್ಕೆ ಸೇರಿದವರು. ಅವರೊಂದಿಗೆ ಅಗ್ನಿಕುಂಡಕ್ಕಿಳಿದ ಅನೇಕರನ್ನು ನಾನು ಪ್ರತ್ಯೇಕವಾಗಿ ಭೇಟಿಮಾಡಿದ್ದೇನೆ. ಇದು ಶಕ್ತಿ ದೇವತೆಯ ಪ್ರಭಾವದ ಒಂದು ನೋಟ ಎಂಬ ಮಾತನ್ನು ಅವರೆಲ್ಲರೂ ಒಪ್ಪಿಕೊಳ್ಳುತ್ತಾರೆ. ಅನೇಕ ಜಾತ್ರೆಗಳಲ್ಲಿ ಅಗ್ನಿ ತುಳಿಯುವ ಸಂಪ್ರದಾಯವಿರುವುದನ್ನು ನಾವು ಇಂದಿಗೂ ಕಾಣುತ್ತೇವೆ. ಆದರೆ ಆಂಜನೇಯಸ್ವಾಮಿಯ ಸಮ್ಮುಖದಲ್ಲಿ ವೈಷ್ಣವ ಪದ್ಧತಿಗನುಸಾರವಾಗಿ ಹೀಗೆ ಅಗ್ನಿ ತುಳಿಯುವುದು ಅತಿ ವಿರಳವೆಂದೇ ಹೇಳಬಹುದು.

---

(10ನೇ ಪುಟದಿಂದ)

ದಿಂದ ಅದು ಬಂಧಿತವಾದರೆ ಅದು ಅಸತ್ ಆಗುತ್ತದೆ. ಮಾಯೆಯ ವಿಷಯದಲ್ಲಿ ಈ ಎರಡು ಪ್ರಾಕಾರಗಳು ಅಸಂಗತವಾಗುತ್ತವೆ. ಬ್ರಹ್ಮ ಜ್ಞಾನ ಹುಟ್ಟಿದ ನಂತರ ಮಾಯೆಯ ಜ್ಞಾನ ಬಂಧಿತವಾಗುತ್ತದೆ. ಬ್ರಹ್ಮಜ್ಞಾನ ಹುಟ್ಟಿದ ನಂತರ ಮಾಯೆಯ ಜ್ಞಾನ ಬರುವುದಿಲ್ಲ. ಕೇವಲ ಅಜ್ಞಾನಿಯು ಮಾಯೆಗೆ ಸಿಲುಕುತ್ತಾನೆ. ಮಾಯೆಯು ಸತ್ ಆಗಲಿ ಅಸತ್ ಆಗಲಿ ಆಗುವುದಿಲ್ಲ. ಆದರಲ್ಲಿ ಬಾಧೆ ಮತ್ತು ಪ್ರತೀತಿ ಎಂಬ ಎರಡು ವಿರುದ್ಧ ಧರ್ಮಗಳಿರುವುದರಿಂದ ಅದನ್ನು "ಅನಿರ್ವಚನೀಯ" ಎಂದು ಕರೆಯಲಾಗಿದೆ.

ಮಾಯಾಶಕ್ತಿಗಳು ಎರಡು. ಒಂದು ಆವರಣ. ಇನ್ನೊಂದು ವಿಕ್ಷೇಪ. ಆವರಣ ಎಂದರೆ ವಾಸ್ತವ ಸ್ವರೂಪವನ್ನು ಮುಚ್ಚುವುದು. ವಿಕ್ಷೇಪ ಎಂದರೆ ಅದರ ಮೇಲೆ ಇನ್ನೊಂದು ವಸ್ತುವನ್ನು ಆರೋಪ ಮಾಡುವುದು. ಮಾಯೆಯ ಸಹಾಯದಿಂದ ವಸ್ತು ಭೂತಬ್ರಹ್ಮನ ವಾಸ್ತವರೂಪವನ್ನು ಮುಚ್ಚಿ ಅದರಲ್ಲಿ ಆ ವಸ್ತುರೂಪವಾದ ಜಗತ್ತಿನ ಪ್ರತೀತಿ ಉದಯವಾಗುವಂತೆ ಮಾಡಲಾಗುವುದು. ಲೌಕಿಕ ಭ್ರಾಂತಿಗಳಲ್ಲಿ ಪ್ರತಿಯೊಬ್ಬ ವಿಚಾರಶೀಲನಿಗೂ ಈ ಎರಡು ಶಕ್ತಿಗಳ ಅನುಭವ ಉಂಟಾಗುವುದು. ಐಂದ್ರಜಾಲಿಕನು ಪ್ರೇಕ್ಷಕರಿಗೆ ಆಟ ತೋರಿಸುತ್ತಾನೆ. ತನ್ನ ಕೈಚಳಕದಿಂದ ಕಂಕಣವನ್ನು ಮೇಲಕ್ಕೆಸೆದು ನಾಣ್ಯರೂಪದಲ್ಲಿ ಕೆಳಗೆ ಬೀಳುವಂತೆ ಮಾಡುತ್ತಾನೆ. ಇದು ನೂತನ ವಸ್ತುವಿನ ಕಲ್ಪನೆ. ತನ್ನ ವಿದ್ಯೆಯ ಪ್ರಭಾವದಿಂದ ಕಂಕಣದ ವಾಸ್ತವ ರೂಪವನ್ನು ಮುಚ್ಚಿ ನಾಣ್ಯದ ರೂಪ ತೋರಿಸುತ್ತಾನೆ. ಇದು ನೂತನ ವಸ್ತುವಿನ ಕಲ್ಪನೆ. ವಸ್ತುವಿನ ವಾಸ್ತವ ರೂಪವನ್ನು ಮುಚ್ಚುವುದು ಆವರಣ, ಅದೇ ವಸ್ತುವಿನಲ್ಲಿ ನೂತನ ವಸ್ತುವನ್ನು ಉತ್ಪನ್ನ ಮಾಡುವುದು ವಿಕ್ಷೇಪ. ಹಾಗೆಯೇ ಮಾಯೆಯು ಬ್ರಹ್ಮನ ವಾಸ್ತವ ರೂಪವನ್ನು ಮುಚ್ಚಿ ಅವನಲ್ಲಿ ಪೃಥ್ವಿ, ಆಕಾಶ, ಅಗ್ನಿ, ಜಲ–ಇತ್ಯಾದಿಗಳನ್ನು ಆರೋಪಿಸುತ್ತದೆ. ಬ್ರಹ್ಮನಲ್ಲಿ ಯಾವರೂಪವೂ ಇರುವುದಿಲ್ಲ. ಆವರಣ, ವಿಕ್ಷೇಪ–ಈ ಎರಡೂ ಮಾಯಾ ಶಕ್ತಿಗಳ ಸಾಮೂಹಿಕ ವ್ಯಾಪಾರ. ಬ್ರಹ್ಮನ ಶುದ್ಧ ಸ್ವರೂಪವನ್ನು ಆವರಣಶಕ್ತಿ ಮುಚ್ಚುತ್ತದೆ. ವಿಕ್ಷೇಪಶಕ್ತಿಯು ಆಕಾಶಾದಿ ಪ್ರಪಂಚವನ್ನು ಉತ್ಪನ್ನಮಾಡುತ್ತದೆ.

ಜೀವಬ್ರಹ್ಮದ ಐಕ್ಯ:— ಜೀವ ಮತ್ತು ಬ್ರಹ್ಮದ ಐಕ್ಯವನ್ನು 'ತತ್ತ್ವಮಸಿ' ಎಂಬ ಮಹಾವಾಕ್ಯದ ಅರ್ಥವಿವರಣೆಯಿಂದ ಪ್ರತಿಪಾದಿಸಲಾಗಿದೆ. ಅದ್ವೈತ ದರ್ಶನದ ತಿರುಳು ಈ ವಾಕ್ಯದ ಅರ್ಥದಲ್ಲಿದೆ ಎಂದು ತಿಳಿಸಲಾಗಿದೆ. ಜೀವ ಬ್ರಹ್ಮರಲ್ಲಿ ಸಂಪೂರ್ಣ ಅಭೇದವನ್ನು ತಿಳಿಸುವುದು ಈ ದರ್ಶನದ ಗುರಿ. ಜೀವ, ಬ್ರಹ್ಮರಲ್ಲಿ ಶುದ್ಧ ಚೈತನ್ಯವನ್ನು ಅಂಗೀಕರಿಸಿ ಏಕತೆಯನ್ನು ನಿರೂಪಿಸಲಾಗಿದೆ. 'ತ್ವಂ' ಅಲ್ಪಜ್ಞನಾದ ಜೀವ. 'ತತ್' ಸರ್ವಜ್ಞ ಚೇತನನಾದ ಬ್ರಹ್ಮ. ಇಲ್ಲಿ ಅಲ್ಪಜ್ಞ, ಸರ್ವಜ್ಞ ಎರಡೂ ವಿರುದ್ಧ ಧರ್ಮಗಳು. ಈ ವಿರುದ್ಧ ಧರ್ಮಗಳ ಏಕತೆ ಹೇಗೆ? ಎಂದರೆ ಈ ವಿರುದ್ಧ ಧರ್ಮಗಳನ್ನು ಬಿಟ್ಟು ಚೇತನಾತ್ಮ, ಚೇತನಬ್ರಹ್ಮ ಎರಡೂ ಒಂದೇ. ಭಾಗವೃತ್ತಿ ಲಕ್ಷಣದಿಂದ ಏಕತ್ವ ಸಿದ್ಧಿಸುತ್ತದೆ. ಹಾಗೆಯೇ ಬ್ರಹ್ಮ ಅದ್ವಿತೀಯವಾದುದರಿಂದ, ಸತ್ತ್ವ, ಜ್ಞಾನ, ಅನಂತ ಎಂಬ ಮಹಾವಾಕ್ಯದ ಪದಗಳು ಬ್ರಹ್ಮನ ಲಕ್ಷಣವೇ ವಿನಹ ವಿಶೇಷಣಗಳಲ್ಲ.

ಕಣ್ಣಿಗೆ ಕಾಣುವ ವಸ್ತುಗಳನ್ನು ಹೇಗೆ ಇಲ್ಲವೆಂದು ತಿಳಿಯುವುದು? ಜೀವನು ತಾನು ಜ್ಞಾತಾ, ಕರ್ತಾ, ಭೋಕ್ತಾ ಎಂದು ತಿಳಿಯುವನು. ಇದು ಭ್ರಾಂತಿ. ಅವನಿಗೆ ಅಗತ್ಯವಾದ ವಸ್ತುಗಳು ಸತ್ಯವಾಗಿರುವಂತೆ ತೋರುತ್ತದೆ. ಇದನ್ನು ಪ್ರಾತಿಭಾತಿಕಸತ್, ವ್ಯಾವಹಾರಿಕಸತ್ ಎಂದು ಹೇಳಲಾಗಿದೆ. ಆತ್ಮನಿಗಿಂತ ಅಧಿಕವಲ್ಲದ ವಿಷಯವನ್ನು ತಿಳಿಸುವುದಕ್ಕೆ ವ್ಯಾವಹಾರಿಕ ಸತ್ ಎನ್ನಲಾಗಿದೆ. ಆತ್ಮನಿಗಿಂತ ಬೇರೆವಸ್ತು ಇಲ್ಲವೆಂದು ತಿಳಿಸುವುದು ಪ್ರಾತಿಭಾತಿಕಸತ್, ಬ್ರಹ್ಮನಿಗಿಂತ ಬೇರೆ ವಸ್ತು ಇಲ್ಲದ್ದರಿಂದ ಇದೆ ಎಂದು ತಿಳಿಯುವುದು ಭ್ರಾಂತಿಯಿಂದ ಉಂಟಾದುದು. ಈ ಭ್ರಾಂತಿಗೆ ಮೂಲ ಅವಿದ್ಯಾ ಅಥವ ಅಜ್ಞಾನ. ಈ ಅಜ್ಞಾನವು ಮಾಯಾ ಕಾರ್ಯವಾಗಿ ಪರಿಣಮಿಸಿದೆ. ಬ್ರಹ್ಮನು ಈ ಮಾಯಾ ಉಪಾಧಿ ಇಲ್ಲದವನು. ಅಸತ್ಯವಾಗಿರುವ ವಸ್ತುಗಳನ್ನು ಸತ್ಯವೆಂಬ ಭ್ರಾಂತಿಯಿಂದ ಅವನು ಪರಿಭ್ರಮಿಸುವನು. "ತತ್ತ್ವಮಸಿ" ಎಂಬ ಮಹಾವಾಕ್ಯದ ಜ್ಞಾನದಿಂದ ಈ ಅಜ್ಞಾನ, ಭ್ರಾಂತಿಗಳು ನಿವೃತ್ತಿಯಾಗಿ ಜೀವಬ್ರಹ್ಮೈಕ್ಯಜ್ಞಾನವುಂಟಾಗುವುದು.

---

# ದಾಸಸಾಹಿತ್ಯದಲ್ಲಿ ಮಾನವೀಯ ಮೌಲ್ಯಗಳು

ಪ್ರೊ॥ ವಸಂತ ಕುಷ್ಟಗಿ

ಬದಲಾಗುತ್ತಿರುವ ಪ್ರಪಂಚದ ಪರಿಸರದಲ್ಲಿ ವಿಜ್ಞಾನದ ಪಾತ್ರವು ಇಂದು ಬಹುಮಹತ್ವದ್ದಾಗಿದೆ. ವಿಜ್ಞಾನವು ವಿಶೇಷ ಜ್ಞಾನವನ್ನು ಒದಗಿಸುತ್ತಿರುವುದರಿಂದ ಜ್ಞಾನಕ್ಕೆ ಹೊಸ ತಿರುವು ಬಂದಿದೆ, ಹೊಸ ಹೊಸ ಆಯಾಮಗಳು ಬೆಳೆದು ನಿಂತಿವೆ. ಅದಕ್ಕೆ ಕಾರಣ ವಿಜ್ಞಾನವು ತನ್ನ ಶಕ್ತಿಯ ಬಲದಿಂದ ಇಡೀ ಪ್ರಪಂಚವನ್ನು ಸಂಕುಚಿತಗೊಳಿಸಿರುವುದೆಂದು ನಂಬಬಹುದಾಗಿದೆ. ಕೊಡ.ಕೊಳ್ಳುವ ವ್ಯವಹಾರದಲ್ಲಿ ಸಂಪರ್ಕ ಸಾಧನೆ ಅತ್ಯಂತ ಪ್ರಧಾನ ಪಾತ್ರವಹಿಸಿ ನೀತಿ ನಿಯಮಗಳಲ್ಲಿ, ಆಚಾರ ವಿಚಾರಗಳಲ್ಲಿ, ಉಡ.ಗೆ ತೊಡಿಗೆಗಳಲ್ಲಿ, ತಿಂಡಿ ತಿನಿಸುಗಳಲ್ಲಿ — ಹೊರಗಿನ ಕಣ್ಣಿಗೆ ಹೊಸ ಮೌಲ್ಯಗಳನ್ನು ಸಾಧಿಸಿದೆಯೇನೋ ಎಂಬ ಭಾವನೆಯನ್ನೂ ತಂದೊಡ್ಡಿದೆ. ಈ ಭ್ರಮೆಯೇ ಇಡೀ ಮನಕುಲದ ತಳವನ್ನೇ ಅಲ್ಲಾಡಿಸಿ, ಭಸ್ಮಾಸುರನಾಗಿ ಬಿಡುತ್ತದೆಯೇನೋ ಎಂಬ ಭಯ, ತಿಳಿವಳಿಕೆಯನ್ನು ಮೇಳವಿಸಿಕೊಂಡ ವಿಜ್ಞಾನಿಗಳನ್ನು ಕಾಡುತ್ತದೆ. ಈ ಭಯಕ್ಕೆ ಇಾದು ನಿರಸನವೇನಾದರೂ ಇದೆಯೇ?

ಹೌದು. ಈ ಭಯಕ್ಕೆ ನಿರಸನವು ಇದೆ.

ಪ್ರಪಂಚದ ಹುಟ್ಟಿನಿಂದ ಇಂದಿನವರೆಗೆ ವಿಜ್ಞಾನದ ಸಾಧನೆಗಳನ್ನು ಸ್ವಾಗತಿಸಿ, ಬದುಕಿನಲ್ಲಿ ಸುಖವನ್ನು ತರಲು ಹವಣಿಸಿದ್ದೇವೆ. ಸುಖ ಅತಿಯಾದಾಗ ಅದು ಶಾಶ್ವತವಲ್ಲವೆಂದು ಅನಂದದತ್ತ ಧಾವಿಸಿದ್ದೇವೆ. ಆಗ ವಿಜ್ಞಾನದ ಅಂತರಂಗದ ಮೂಲನಾಡಿಯು ಅಧ್ಯಾತ್ಮವೆಂದು ತಿಳಿದು ನಡೆದಿದ್ದೇವೆ. ಈಗಲೂ ನಾವು ಅದನ್ನು ಮರೆತಿಲ್ಲ. ಆದರೆ ಅನೇಕ ವಲಯಗಳಲ್ಲಿ, ಸುಖದ ಮಂಜು ರಾಶಿ ರಾಶಿಯಾಗಿ ಬಿದ್ದು, ಹಿಮಾಲಯವಾಗಿದ್ದು ಅದೇ ಧ್ಯೇಯವಾಗಿ ಕಾಣಿಸತೊಡಗಿದೆ. ಆದ್ದರಿಂದ ಅಂತಹವರ ಕಾಲುಗಳೆಲ್ಲ ಆ ಮಂಜಿನ ಹುದಲಿನಲ್ಲಿ ಹೂತು ಹೋಗಿದೆ. ಅದ್ದರಿಂದ, ಅಂತಹರಿಗೆ ಅಧ್ಯಾತ್ಮಜನಿತ ಪ್ರಯೋಜನವೂ ಮುಚ್ಚಿ ಹೋಗಿ, ಅಶಾಶ್ವತ ಬದುಕೇ ಮಹತ್ತ್ವವಾಗಿ ಕಂಡಿದೆ. ಅದನ್ನು ಮೀರಿದ ಅನಂತದ ಕಲ್ಪವಿರುವುದೆಂಬುದರ ನೆನಪಿನ ಎಳೆಯೂ ಹೂತು ಹೋಗಿದೆ.

ಈಗ ನಾವು ವಿಜ್ಞಾನದ ಸರಿಯಾದ ಉಪಯೋಗವನ್ನು ಪ್ರಪಂಚಕ್ಕೆ ಒದಗಿಸಬೇಕಾದರೆ, ಅದರ ಅಂತರಂಗದ ಪ್ರಭೆಯನ್ನು ಸಾಮಾನ್ಯರ ಅರಿವಿಗೂ ಮೂಡಿಸಬೇಕು. ಈ ದಿಸೆಯಲ್ಲಿ ಆಯಾ ಪ್ರಾಂತದ ಸಂತ ಸಾಹಿತ್ಯಕ್ಕೆ ನಾವೆಲ್ಲ ಮೊರೆ ಹೋಗಬೇಕು. ಅಲ್ಲಿಯೇ ನಮಗೆ ಬೇಕಾದ ಭಯದ ನಿರಸನ ದೊರೆಯುತ್ತದೆ. ಈ ದೃಷ್ಟಿಯಿಂದ ಸಂತ ಸಾಹಿತ್ಯದ ನಾಡಿಯನ್ನೆಲ್ಲ ಪರೀಕ್ಷಿಸಿದಾಗ, ಆ ನಿಟ್ಟಿನವರೆಲ್ಲ ಪ್ರಪಂಚದ ಪುದುಬಾಳ್ಳಿಗೆ ಹಣಗಾಡಿದ್ದಾರೆಂದು ಗೊತ್ತಾಗುತ್ತದೆ. ಈ ಮಾರ್ಗದವರೆಲ್ಲ ತಮ್ಮ ಬದುಕಿನಿಂದಲೇ ಮಾತಾಡಿದ್ದಾರೆ. ತಮ್ಮ ಉಸಿರಿನಿಂದಲೇ ಪರಿಸರದಲ್ಲಿ ಪ್ರಾಣ ತುಂಬಿದ್ದಾರೆ. ಈ ದೃಷ್ಟಿಯಿಂದ ಕನ್ನಡ ಸಾಹಿತ್ಯವನ್ನು ಪರಿಗಣಿಸಿದಾಗ ಅಲ್ಲಿ ಜೈನ, ವೀರಶೈವ, ಬ್ರಾಹ್ಮಣ ಎಲ್ಲ ಪ್ರಕಾರಗಳ ಮನೋಧರ್ಮಗಳೂ ಒಂದೇ ಗುರಿಯನ್ನು ಸಾಧಿಸಿವೆ ಎಂಬುದನ್ನು ಮನಗಾಣಬಹುದಾಗಿದೆ. ಅದೆಂದರೆ ಮನುಷ್ಯನ ಒಟ್ಟು ಬಾಳ್ವೆಯ ಆಂದ, ಅವನ ಅಂತರಂಗದ ನೆಮ್ಮದಿಯಿಂದ ಎಂಬುದು. ಆ ಅನಂತರಂಗದ ನೆಮ್ಮದಿಯೇ ಅಧ್ಯಾತ್ಮದ ಬೆಳಕು. ಅವರು ನಡೆದು ನೀಡಿದ ಬದುಕೇ ಅದು. ಅದೇ ವಿಜ್ಞಾನದ ಅಂತರಂಗ ಅಲ್ಲಿಂದಲೇ ಭಯ ನಿರಸನದ ಆರಂಭ ಮತ್ತು ಅಲ್ಲಿಂದಲೇ ಅದರ ಕೊನೆ.

ಮೇಲೆ ಹೆಸರಿಸಿದ ಪ್ರಕಾರಗಳಲ್ಲಿಯೇ ಅಡಕವಾಗಿರುವ ಬಹು ಪ್ರಮುಖವಾದ ಸತ್ತ್ವಗಳಲ್ಲಿ ಒಂದೆಂದರೆ ದಾಸ ಸಾಹಿತ್ಯ.

ದಾಸ ಸಾಹಿತ್ಯವು ಒಂದು ಮತ ಪಂಥಕ್ಕೆ ಸೀಮಿತವಾದವಲ್ಲ. ಅದರೆ ಬಹಳಷ್ಟು ಜನ ದಾಸ ಸಾಹಿತ್ಯವನ್ನು ಕೇವಲ ಮತೀಯ ದೃಷ್ಟಿಯಿಂದ ನೋಡುವುದುಂಟು. ಅಂತಹರಿಗೆ ಅದರ ಒಳಮಿಡಿತಗಳನ್ನು ಗುರುತಿಸುವ ವಿಶಾಲ ದೃಷ್ಟಿ ಬಂದರೆ, ಅದು ಇಡೀ ಮಾನವ ಕಲ್ಯಾಣವನ್ನೇ ಸಾಧಿಸಿದ ಕಾಮಧೇನು ಕಲ್ಪವೃಕ್ಷವೆಂಬುದು ತಿಳಿಯುತ್ತದೆ. ಆ ಕೆಲಸವನ್ನು ಇಂದಿನ ವಿವೇಕಿಗಳು ಮಾಡಬೇಕಾಗಿದೆ. ಅದರಲ್ಲಿಯೂ ಸಾಹಿತ್ಯದ ವಿದ್ಯಾರ್ಥಿಗಳು ವಿವೇಚಿಸಿ ಪರಿಣಾಮಕಾರಿಯಾಗಿ ತಿಳಿಹೇಳಬೇಕಾಗಿದೆ. ಅದಕ್ಕೆ ಅಂಟಿ ಕೊಂಡಿರುವ ಜಿಡ್ಡನ್ನು ತೊಳೆದು ಸಾಧಿಸಿದಾಗ, ಸಮಾಜ ವಿಜ್ಞಾನಿಗಳು ರಾಜಕೀಯ ತಂತ್ರಜ್ಞಾನಿಗಳು, ನಿಪುಣಾಗ್ರಣಿಗಳು, ವಿಜ್ಞಾನಿಗಳಂತೂ ಸರಿಯೆ, ಪ್ರತಿಯೊಬ್ಬರೂ ಬೆರಳು ಕಚ್ಚಬೇಕಾದೀತು.

ದಾಸಸಾಹಿತ್ಯ ಪ್ರದೀಪಿಕೆಯಲ್ಲಿ ಮಾನವ ಜನ್ಮವು ಬಹುದೊಡ್ಡದು. ಅದರ ಮುಂದೆ ಇನ್ನೊಂದಿಲ್ಲ. ಆದ್ದರಿಂದ ಪರಿಸರಕ್ಕೆ ತನ್ನ ಗಾತ್ರದಷ್ಟನ್ನಾದರೂ ಪರೋಪಕಾರ ಮಾಡಬೇಕು ಎಂದರೆ ತಾನು ತನ್ನ ಪ್ರಮಾಣದಲ್ಲಿ ಬಾಳುವ ಪರಿಸರದಲ್ಲಿ ನೈರ್ಮಲ್ಯವನ್ನು ಕಾಪಾಡಿಕೊಳ್ಳಬೇಕೆಂದು ಅರ್ಥ. ಇದನ್ನು ಇನ್ನಷ್ಟು ವಿಶ್ಲೇಷಿಸಿ ಹೇಳಬೇಕಾದರೆ, ಅವನು ತನ್ನ ಮನಸ್ಸಿನ ಒಳನಿಟ್ಟಿನಲ್ಲಿಯೂ ಒಳಿತನ್ನೇ ಚಿಂತಿಸಬೇಕು. ಹಾಗಾಗದಿದ್ದರೆ, ಸೂಕ್ಷ್ಮವಾಗಿ ಅದರ ಕ್ರಿಯಾಣುಗಳು ಹೊರ ಪರಿಸರಕ್ಕೆ ಸ್ಫೋಟಗೊಂಡು, ಅವ್ಯಕ್ತವಾಗಿಯೇ, ಹೊರವಲಯವನ್ನು ಅಪವಿತ್ರಗೊಳಿಸುತ್ತವೆ. ಪರಿಸರದಲ್ಲಿ ಕ್ಷೋಭೆಯನ್ನುಂಟು ಮಾಡುತ್ತವೆ. ಇದನ್ನೇ ಸ್ವಾರ್ಥ ತಾಂಡವ ಎನ್ನಬೇಕಾಗುತ್ತದೆ. ಇದೇ ಇಂದು ಅತಿಯಾಗಿ ಪರಿಸರ ಹೊಲಸಾಗಿ ಹೋಗಿದೆ. ಅದಕ್ಕಾಗಿ ಈ ಎಲ್ಲದರ ಮೂಲ ಘಟಕ ಮಾನವನು ಒಳ್ಳೆಯವನಾಗಬೇಕಾಗಿದೆ. ಭೂಮಿಗೆ ಭಾರವಾಗದೆ ಬದುಕಬೇಕಾಗಿದೆ. ಅದಕ್ಕಾಗಿ ವಿಶ್ವಕ್ಕೇನೇ ದಾಸರು ತಿಳಿಯಾದ ಕನ್ನಡದಲ್ಲಿ,

ವಿಷವನುಣಿಸಿದವಗೆ
ಷಡ್ರಸವನುಣಿಸಲು ಬೇಕು
ದ್ವೇಷಮಾಡುವವನ ಪೋಷಿಸಲು ಬೇಕು
ಹುಸಿದು ಮನಕೊಂಬವನ
ಹಾಡಿ ಹರಿಸಲು ಬೇಕು
ಅಸು ಹೀರಿದವನ ಹೆಸರ ಮಗನಿಗಿಡಬೇಕು.
ಕೊಂಡೊಯ್ದು ಕೆಡಿಸುವನ
ಕೊಂಡಾಡುತ್ತಿರಬೇಕು
ಕಂಡರಾಗದರ ತಾ ಕರೆಯಬೇಕು.
ಪುಂಡರಿಕಾಕ್ಷ ಶ್ರೀ ಪುರಂದರವಿಠಲನ
ನೆನೆಯ ಬೇಕಯ್ಯಾ

ಎಂಬಂತಹ ಮಾತುಗಳನ್ನು ಸಕಲರೂ ಅನುಷ್ಠಾನಕ್ಕೆ ತರಲು ಸಾರಿದ್ದಾರೆ. ತಾವೆಲ್ಲ ಹಾಗೆಯೇ ನಡೆದು ಗೋಪಾಳ ಬುಟ್ಟಿ ಹಿಡಿದು, ಬೀದಿಗಳಲ್ಲಿ ಕೇರಿ ಕೇರಿಗಳಲ್ಲಿ, ಚಿಟಗಿ ಹಿಡಿದು, ಮನಕ್ಕೆ ಚಿಟಗಿ ಹಾಕಿ, ಗೆಜ್ಜೆ ಕಟ್ಟಿಕೊಂಡು ಅಡ್ಡಾಡಿ ಕುಣಿದಾಡಿ ಹಾಡಿಹಾಡಿ, ಒಲ್ಲೆನೆಂದರೂ ಹೃದಯಕ್ಕೆ ಮುಟ್ಟಿಸಿದ್ದಾರೆ. ಅವರ ಬದುಕಿನ ಸಾಹಿತ್ಯಕ್ಕೆ ಸಂಜೀವಿನಿಯಾಗಿ ಅಂದಿನ ಪರಿಸರವನ್ನೇ ಬಳಸಿ ಅವರು ಸಮ

ಯಕ್ಕೆ ಒಗ್ಗುವ ನುಡಿಮುತ್ತು ಹೇಳಿ, ನಿರ್ಮಲಗೊಳಿಸಿದ್ದಾರೆ. ಈ ಮಾತುಗಳು ಇಂದಿಗೂ ವಾತಾವರಣದಲ್ಲಿ ಭದ್ರವಾಗಿವೆ. ಅವುಗಳನ್ನು ಪ್ರತಿಯೊಬ್ಬರೂ ನೆರೆಹಿಡಿದು ದಾರಿ ದೀಪವಾಗಿಸಿಕೊಂಡು ಬದುಕಬೇಕಾಗಿದೆ. ಅಲ್ಲದೇ ಹೋದಲ್ಲಿ, ನಮ್ಮ ಒಂದಿನಿತೂ ಪ್ರಯತ್ನವಿಲ್ಲದಿದ್ದರೆ, ( ಸಾಹಿತ್ಯ ಚಿಂತಕರ ) ಆ ಎಲ್ಲ ಮಾತುಗಳು ವಾತಾವರಣದಲ್ಲಿ ಸಾಮಾನ್ಯರಿಗೆ ಸಿಕ್ಕದೇ ಹೋಗಬಹುದು. ಏಕೆಂದರೆ ಈ ಎಲ್ಲ ಮಾತುಗಳು ಸದಾಕಾಲ ಚಲಾವಣೆಯಲ್ಲಿರಬೇಕಾಗಿದೆ. ಅದರಲ್ಲಿಯೂ ವಿಶೇಷತಜ್ಞತೆಯ ಈ ಕಾಲದಲ್ಲಿ ತೀರ ಅವಶ್ಯ.

ವಿಶೇಷ ತಜ್ಞತೆಯ ಬಗೆಗೆ ಒಂದು ಮಾತು.

ವಿಜ್ಞಾನವು ವಿಚಿತ್ರವಾಗಿ ಬೆಳೆದು, ನೆಲದ, ನೀರಿನ, ಗಾಳಿಯ, ಬೆಂಕಿಯ, ಆಕಾಶದ ಪ್ರತಿಯೊಂದು ಅಂಗ ಅಂಗದಲ್ಲಿಯೂ ಕಣಕಣದಲ್ಲಿ ವಿಶೇಷವಾಗಿ ವೈದ್ಯಕೀಯ ವಿಜ್ಞಾನದಲ್ಲಿ, ಎಡಕಿವಿ, ಬಲಗಿವಿ, ಮೂಗು, ಕಣ್ಣು, ಹೃದಯ, ಕಾಲು, ರಕ್ತಮಾಂಸ, ನರ – ಹೀಗೆ ನಾನಾವಿಧವಾದ ವೈದ್ಯ ತಜ್ಞರು ತಮ್ಮ ತಮ್ಮ ಕ್ಷೇತ್ರಾಭಿಮಾನಿಗಳಾಗಿ ಕೆಲಸ ಮಾಡಿ ಮನುಷ್ಯನ ಸಾಂದ್ರತೆಯನ್ನು ಬೆಳೆಸುತ್ತಿದ್ದಾರೆ. ಹಾಗೆಯೇ ವಿಜ್ಞಾನದ ಅಂತರಂಗವಾಗಿರುವ ಅಧ್ಯಾತ್ಮವೂ ಮನುಷ್ಯನ ಮನಸ್ಸಿನ ತರಬೇತಿಗೆ ವಿಶೇಷತಜ್ಞ ವಿಧಾನಗಳನ್ನು ಎಂದೋ ಕಂಡು ಹಿಡಿದಿದೆ. ಆ ವಿಧಾನಗಳನ್ನೇ ಮೇಲೆ ಉದಾಹರಿಸಿದಂತಹ ಸಂತ ಸಾಹಿತ್ಯವಾದ ದಾಸ ಸಾಹಿತ್ಯವು ಸಾರಿ ಸಾರಿ ಹೇಳಿದೆ. ಇಂತಹ ಪದಗಳ ಮುಖಾಂತರ ದಾಸಾರ್ಯರು, ಯಾರು ಯಾರಿಗೆ ಯಾವ ತರಹದ ಮನೋರೋಗಗಳಿವೆಯೊ ಅವುಗಳನ್ನು ನಿವಾರಿಸುವ ಅಂತಹ ಸಾಧನಮಾರ್ಗಗಳನ್ನು ಹೇಳಿದ್ದಾರೆ. ಯಾರಿಗೆ ಯಾವುದು ಬೇಕೋ ಅಂತಹದ್ದನ್ನು ಹಗುರವಾಗಿ ಎತ್ತಿಕೊಂಡು ಸಾಧನೆ ಮಾಡಬೇಕೆಂಬ ಸೂಚನೆಯನ್ನು ಗಮನಿಸಬೇಕು. ವೈದಕೀಯ ತಜ್ಞರು ಚುಚ್ಚಿಯೋ, ಕೊಯ್ದೋ, ಔಷಧಿ ತುಂಬಿಯೋ ಮನುಷ್ಯನ ಹೊರ ಚಲುವಿಕೆಯನ್ನು ಕಾಯ್ದರೆ, ದಾಸರು ತಮ್ಮ ನಡೆಯ ಒಂದೊಂದು ನುಡಿಯಿಂದ ಮನವನ್ನು ಅರಳಿಸಿದ್ದಾರೆ. ವಿಜ್ಞಾನದ ಬಲವನ್ನು ಹೆಚ್ಚಿಸಿದ್ದಾರೆ. ಅದರಿಂದ ಲೋಕ ವಿನಾಶವಾಗದೆ, ಲೋಕ ತಾರಕವಾಗಿದೆ, ಭಸ್ಮಾಸುರನನ್ನು ಚಾಪೆಸುತ್ತಿ, ನಾವೇ ನಮ್ಮ ನಡೆಯಿಂದ ಭಸ್ಮಮಾಡುವ ಸಾಧನ ಶಕ್ತಿಯನ್ನು ನೀಡಿದ್ದಾರೆ. ಹೀಗಾಗಿ ದಾಸರ ನಡೆ ನುಡಿ ಸಾಹಿತ್ಯವೇ ಆಗಿರುವುದರಿಂದ ಯಾವ ಕಾಲಕ್ಕೂ ಅದು ಜೀವನ ಸಾಹಿತ್ಯ. ಅಂತೆಯೇ ಅದು ಚಿರಂಜೀವಿಯಾದ ಲೋಕತಾರಕ ಶಕ್ತಿ.

ದಾಸರು ಸಾರಿದ ಮಾರ್ಗದಲ್ಲಿ ವಿಜ್ಞಾನ ಯುಗದ ಮಾನವನು ನಡೆಯ ಕಲಿತಾಗ, ನಡೆದು ನಡೆದು ಬುದ್ಧಿ ಘಟ್ಟಿಯಾದಾಗ, ಹಿಮಾಲಯದ ಮಂಜುಕರಗಿ ಹೋಗಿ ಆ ಶಿರೋರುಹಗಳು ಆನಂದವನ್ನು ಅನುಭವಿಸ ತೊಡಗುತ್ತವೆ. ಆಕಾಲೇಶವ ಮಾಡಪಲೆ ಸಂಸಾರವನ್ನು ಸಸಿನೆಗೊಳಿಸುತ್ತಾನೆ. ಭವಸಾಗರದಲ್ಲಿ ತಾವರಸಜಲದಂತೆ ಪ್ರೇಮಿಯಾಗಿ ಧೀರ ಕೃಷ್ಣನನ್ನು ನೆನೆದು, ಗೇರು ಹಣ್ಣಿನ ಬೀಜದಂತೆ ಈ ಲೋಕದಲ್ಲಿ ಮಿಂಚಿ ಆ ಲೋಕದಲ್ಲಿಯೂ ಕಂಚು ಮಿಂಚಾಗಿಯೇ ಇರುತ್ತಾನೆ. ಹೀಗಾಗುವುದರಿಂದ ಅವನ ಅಂತರಂಗ ಶುದ್ಧವಾಗಿ, ಕೆಳಗಿನ ಎಚ್ಚರಿಕೆಗಳನ್ನು ಧ್ಯಾನದಲ್ಲಿಟ್ಟು ಅವರು ಸಾಗುತ್ತಾನೆ.

ಪರರು ಮಾಡಿದ ಪಾತಕವ
ನಾಲಗೆಯೊಳುಚ್ಚರಿಸದಿರೆಚ್ಚರಿಕೆ
ಗುರುವರಿಯರ ಸೇವೆ ಮಾಡದೆ,
ಉದರವ ಹೊರೆಯದಿರೆಚ್ಚರಿಕೆ
ಹೀನ ಮಾನಿನಿಯರ ಧ್ಯಾನ
ಕಾನನದೊಳಗಿಳಿಯದಿರೆಚ್ಚರಿಕೆ
ನಾನೆಂಬ ಅಹಂಕಾರವ ಮಾಡಿ
ನರಕದೊಳು ನರಳದಿರೆಚ್ಚರಿಕೆ
ನಡೆವಾಗ ನುಡಿವಾಗ ಗಿಡವೆಲ್ಲ
ನಂಟರು ಕಡೆಗಿಲ್ಲ ಎಚ್ಚರಿಕೆ

ಇಂತಹ ಎಚ್ಚರಿಕೆ ಗಂಟೆಗಳಲ್ಲಿ ಮೈಯೆಲ್ಲ ಕಣ್ಣಾಗಿ ಕಿವಿಯಾಗಿ ನುಡಿಯಾಗಿ ನಡೆಯಾಗಿ ಸಾಗುವವನಿಗೆ ಇಂದಿನ ಗೊಂದಲದ ಗೊಂದಲಿಗರು ಮತ್ತೆ ಅಮಿಷಗಳ ಜಾಡ ಸೆಳೆಯಬಹುದೇನೋ? ಅಂತಹರಿಗೆಲ್ಲ ಉದಾತ್ತ ಜೀವನದರ್ಶನವನ್ನು ದಾಸಸಾಹಿತ್ಯವು ಎಡೆಹಿಡಿದು ಎಡೆಮಾಡಿ ಕೊಟ್ಟಿದೆ. ಕಣ್ಣಿಲ್ಲದ ಕುರುಡನೂ ಆ ಎಡೆ ನೋಡಬಲ್ಲ. ಆ ಎಡೆಗೆ ಕೂಡಬಲ್ಲ. ತಾನೂ ಅಂತಹ ಎಡೆಯನ್ನು ನೀಡಬಲ್ಲ, ನೀಡಿ ದಾಸನಾಗಬಲ್ಲ. ಆ ಎಡೆಯೇ ಅರ್ಥ ಶಾಸ್ತ್ರ, ಸಮಾಜ ಶಾಸ್ತ್ರ ಇತ್ಯಾದಿ ಅನೇಕ ಶಾಸ್ತ್ರಗಳಿಗೆ ಸಂಜೀವಿನಿ. ಆ ಎಡೆಯಲ್ಲಿಯ ಪಕ್ವಾನ್ನ ನೋಡಿ ;

ಸಾಲ ಮಾಡಲಿ ಬೇಡ ಸಾಲದೆಂದೆನಬೇಡ
ನಾಳಿಗೆ ಹೇಗೆಂಬ ಚಿಂತೆ ಬೇಡ
ಖೂಳ ಜನರೊಡನೆ ಮಿತ್ರತ್ವ ಮಾಡಲಿ ಬೇಡ
ಬಾಳುವರ ಸಂಗದಲಿ ಬಾಳೆಲವೊ ಬಾಲ

ಇಂತಹ ಪಕ್ವಾನ್ನಗಳಿಂದ ಕೂಡಿದ ಈ ಎಡೆಯಲ್ಲಿ ಸರ್ವದರ್ಶನ ಸಾರವಿದೆ. ಬದುಕುವ ಕಲೆ ಇದೆ. ಇದುವೇ ಇಂದಿನ ವಿಜ್ಞಾನದಿಂದ ಸಂಕುಚಿತವಾಗಿರುವ ಪ್ರಪಂಚಕ್ಕೆ ಬೇಕಾಗಿರುವ ಗಂಡುಗಲಿತನವನ್ನು ನೀಡುವ ವೀರಯೋಗ.

ಈ ವೀರಯೋಗ ಸಾಧನಗೆ ಇಂದಿನ ಪಠ್ಯಕ್ರಮದಲ್ಲಿ ಧರ್ಮ ಶಿಕ್ಷಣಕ್ಕೆ ಅವಕಾಶ ಮಾಡಿಕೊಡಬೇಕಾದುದು, ಮುಂದಿನ ಜಗತ್ತಿನ ಪರಿಸರವನ್ನು ನಿರ್ಮಲವಾಗಿಡುವುದಕ್ಕೆ ಅವಕಾಶ ಮಾಡಿಕೊಟ್ಟಂತಾಗುತ್ತದೆ. ಇಲ್ಲಿ ಧರ್ಮವೆಂದರೆ ಜಾತಿ ಎಂದು ಪಿಡುಗಿನ ಅರ್ಥವನ್ನು ಮಾಡಕೂಡದು. ಧರ್ಮ ಎಂಬುದನ್ನು ವಿಶಾಲ ಅರ್ಥದಲ್ಲಿ, ಅದಕ್ಕೆ ನಿಜವಾಗಿಯೂ ಇರುವ ಅರ್ಥದಲ್ಲಿ, ಮಹಾತ್ಮ ಗಾಂಧೀಜಿಯವರು, ರಾಧಾಕೃಷ್ಣನ್‌ರು, ವಿನೋಬಾ ಮೊದಲಾದವರು ಅರಿತು ಪ್ರಸಾರ ಮಾಡಿದ ರೀತಿಯಲ್ಲಿ ಅರ್ಥಮಾಡಿಕೊಂಡರೆ, ಆಗ

"ಧರ್ಮವೇ ಜಯವೆಂಬ ದಿವ್ಯ ಮಂತ್ರ" ವಾಗುತ್ತದೆ.

ಮಹಾತ್ಮ ಗಾಂಧೀಜಿಯವರು ಧರ್ಮಶಿಕ್ಷಣದ ತಳಹದಿಯೆಲ್ಲ ಧ್ಯಾನ ಎಂಬುದನ್ನು ಅರಿತು ಆ ದಿವ್ಯ ಮಂತ್ರವನ್ನು ತಮ್ಮ ಸತ್ಯಾಗ್ರಹ ಸಾಧನೆಯಲ್ಲಿ ಅಳವಡಿಸಿಕೊಂಡು, ಅದಕ್ಕೆ ಅಗ್ರಸ್ಥಾನವನ್ನು ಕೊಟ್ಟರು. ಅದರ ಮೌಲ್ಯವನ್ನು ಅರಿತ ಜಗತ್ತಿನ ಪ್ರಖ್ಯಾತ ತತ್ತ್ವಜ್ಞಾನಿ, ಶ್ರೇಷ್ಠ ಶಿಕ್ಷಣ ತಜ್ಞ ಡಾ॥ ಎಸ್. ರಾಧಾಕೃಷ್ಣನ್ ಅವರು ಬಹು ಹಿಂದೆಯೇ ಪಠ್ಯಕ್ರಮದಲ್ಲಿ ಧರ್ಮ ಶಿಕ್ಷಣವನ್ನು ಅಳವಡಿಸಲು ಶಿಫಾರಸು ಮಾಡಿದ್ದರು.

ಈ ದೃಷ್ಟಿಯಿಂದ ದಾಸ ಸಾಹಿತ್ಯವು, ವೀರ ಯೋಗ ಸಾಧನೆಯ ಪಠ್ಯಕ್ರಮಕ್ಕಾಗಿ ಸಾಕಷ್ಟು ಸಾಹಿತ್ಯವನ್ನು ಒದಗಿಸಿಕೊಡುತ್ತದೆ. ಇಂತಹ ಅಭ್ಯಾಸ ಕ್ರಮದಲ್ಲಿ ಸುಂದರವಾದ ದೃಷ್ಟಿಯ ಆವಿರ್ಭಾವ. ಆ ದೃಷ್ಟಿಗೆ ವಿಶ್ವವೆಲ್ಲ ಒಂದೆಂಬ ಕಲ್ಪನೆಯ ಸತ್ಯ ಸಾಕ್ಷಾತ್ಕಾರ. ಅದುವೇ ದ್ರಷ್ಟಾರನ ದೃಷ್ಟಾಂತ. ಈ ದೃಷ್ಟಿಯಿಂದ ದ್ರಷ್ಟಾರರು ದಾಸರು. ಅಂತಹರು ಬಡವರಲ್ಲ. ಪರದೇಸಿಗಳಲ್ಲ. ಯಾರ ಹಂಗಿಗೂ ಒಳಗಾದವರಲ್ಲ. ಧೀರ ಕೃಷ್ಣನಿಗೆ ಆಣೆಯಿಡುವ ಅಭಿಮಾನಧನರು. ಧರ್ಮದ ಗಟ್ಟಿ ತಳಹದಿಯ ಮೇಲೆ ಭದ್ರವಾಗಿರುವ ವೀರ ಸಂಸಾರ ಯೋಗಿಗಳು. ಅಂತಹರಿಗೆ ಹರಿಪೂಜೆಯು ಬಹು ಸುಲಭ. ಆ ಪೂಜೆಯ ಸ್ವಾರಸ್ಯವೆಲ್ಲ ಹಾಲ್ಗಡಲು. ಆ ಹಾಲ್ಗಡಲಿನ ಸವಿಯ ಒಂದು ಪದ

ಸುಲಭ ಪೂಜೆಯ ಕೇಳಿ ಬಲವಿಲ್ಲದವರು
ಕಾಲಕಾಲದ ಕರ್ಮ ಕಮಲಾಕ್ಷಗರ್ಪಿಸಿ ॥ಪ॥
ಇರುಳು ಹಚ್ಚುವ ದೀಪ ಹರಿಗೆ ನೀರಾಜನವು
ಮರುವುಡುವ ಧೋತರವು ಪರಮ ವಸ್ತ್ರ
ತಿರುಗಾಡಿ ದಣಿಯುವುದು ಹರಿಗೆ ಪ್ರದಕ್ಷಿಣೆಯು
ಮರಳಿ ಹೊಡಮರಳುವುದು ನೂರೆಂಟು ದಂಡ
ನುಡಿವ ಮಾತುಗಳೆಲ್ಲ ಪಾಂಡುರಂಗನ ಜಪವು
ಮಡದಿ ಮಕ್ಕಳು ಎಲ್ಲ ಒಡನೆ ಪರಿಹಾರ
ನಡುಮನೆಯ ಅಂಗಳವು ಉಡುಪಿ ಭೂವೈಕುಂಠ
ಎಡ ಬಲದ ಮನೆಯವರು ಕಡು ಭಾಗವತರು
ಹೀಗೆ ಈ ಪರಿಯಲಿ ನಿತ್ಯ ನೀನಿರುತಿರಲು
ಜಗದೊಡೆಯ ಶ್ರೀ ಕೃಷ್ಣ ದಯವ ತೋರುವನು
ಬೇಗದಿ ತಿಳಿದು ಕೇಳಿ, ಹೋಗುತಿದೆ ಆಯುಷ್ಯ
ಯೋಗಿ ಪುರಂದರ ವಿಠಲ ಸಾರಿ ಹೇಳಿದನು

ಹೀಗಾಗಿ ದಾಸ ಸಾಹಿತ್ಯದ ಪ್ರತಿಯೊಂದು ಪದವೂ ಸಾಮಾನ್ಯತಃ ಇಂತಹದೇ ಮೌಲ್ಯಗಳನು ಸಾದರ ಪಡಿಸಿ ಸಸಿನೆ ಸಂಸಾರವನ್ನು ನೀಡಿವೆ. ಈ ದೃಷ್ಟಿಯಿಂದ ದಾಸ ಸಾಹಿತ್ಯವು, ವಿಶ್ವ ಶಿಕ್ಷಣ ಪಠ್ಯಕ್ರಮಕ್ಕೆ, ವಿಶ್ವದ ಪುದುಬಾಳ್ವೆಗೆ— ವೀರಯೋಗದ ಕೊಡುಗೆ. ಪ್ರಪಂಚವನ್ನೇ ಸಂಕುಚಿತಗೊಳಿಸಿದ ವಿಜ್ಞಾನದ ಅಂತರಂಗದ ಅಮೃತ ಕಲಶ. ಧೀರ ಕೃಷ್ಣನ ಗೀತಾಯೋಗವು ಸಾರ್ಥಕವಾದ ಸವ್ಯಸಾಚೀ ಸಾಹಿತ್ಯ ಸಂಜೀವನ.

——

(6ನೇ ಪುಟದಿಂದ)

ಸ್ತೋತ್ರವನ್ನು ಮಹಾಪೂರ್ಣರಿಂದ ಆಲಿಸಿದ ರಾಮಾನುಜರೂ, ಯಾಮುನರೇ ತಮ್ಮ ಗುರುಗಳಾಗಬೇಕೆಂದು ಇಚ್ಛಿಸಿದ್ದರು. ಯಾಮುನರನ್ನು ನೋಡಬೇಕೆಂಬ ಉತ್ಸುಕತೆಯಿಂದ ಶ್ರೀರಂಗಕ್ಕೆ ಹೋದರು. ಯಾರಿಂದ ತಾವು ಮಾರ್ಗದರ್ಶನ ಪಡೆದು ಅಧ್ಯಾತ್ಮ ಮಾರ್ಗದಲ್ಲಿ ಮುಂದುವರೆಯಬಹುದಾಗಿತ್ತೋ, ಯಾದವ ಪ್ರಕಾಶರ ನಂತರ ಗುರುವೇ ಇಲ್ಲದೆ ತೊಳಲುತ್ತಿದ್ದ ತನ್ನನ್ನು ಯಾವ ಮಹನೀಯರು ಕೈಚಾಚಿ ಕರೆದರೋ, ಯಾರ ಶಿಷ್ಯತ್ವ ಪಡೆದು ಉತ್ತರಾಧಿಕಾರಿಯಾಗಬೇಕಾಗಿತ್ತೊ, ಅಂಥಾ ಯಾಮುನರ ದರ್ಶನ ರಾಮಾನುಜರಿಗೆ ಆಗಲಿಲ್ಲ. ಅಲ್ಲಿ ಅವರ ಶವವನ್ನು ಮಾತ್ರ ನೋಡಲು ಸಾಧ್ಯವಾಯಿತು. ಯಾಮುನರಿಂದ ಪ್ರತ್ಯಕ್ಷವಾಗಿ ಉಪದೇಶವನ್ನು ಪಡೆಯಲಾಗಲಿಲ್ಲವಲ್ಲಾ, ಅವರನ್ನು ಜೀವಂತವಾಗಿ ನೋಡುವ ಭಾಗ್ಯ ಸಿಗಲಿಲ್ಲವಲ್ಲಾ, ಎಂದು ಸದಾ ಕೊರಗುತ್ತಿದ್ದರು. ಸಾಂಸಾರಿಕ ಜೀವನದಲ್ಲಿ ಹಾಗೂ ಪ್ರಾಪಂಚಿಕ ವ್ಯವಹಾರಗಳಲ್ಲಿ ಅನಾಸಕ್ತಿ ಹೆಚ್ಚಿತು.

ಯಾದವಪ್ರಕಾಶರ ಶಿಷ್ಯಗೋಷ್ಠಿಯಲ್ಲಿದ್ದಾಗಲೇ, ಯಾಮುನರು ರಾಮಾನುಜರನ್ನು ದೂರದಿಂದಲೇ ಕಟಾಕ್ಷಿಸಿ, ಅವರು ವಿಶಿಷ್ಟಾದ್ವೈತ ಸಿದ್ಧಾಂತ ಪ್ರವರ್ತಕರಾಗುವಂತೆ ಅನುಗ್ರಹಿಸಿ, ಅವರನ್ನು ಇಳೆಯ ಪೆರುಮಾಳ್ ಎಂದು ಕರೆದಿದ್ದರು. ಯಾಮುನರ ಅಂತಿಮೇಚ್ಛೆಯಂತೆ ಅನಂತರ ಆಚಾರ್ಯ ಪೀಠವನ್ನು ಅಲಂಕರಿಸಬೇಕಾದ ರಾಮಾನುಜರಿಗೆ, ಯಾಮುನರಿಂದ ನೇರವಾಗಿ ಉಪದೇಶವು ಲಭಿಸದಿದ್ದರೂ, ಅವರ ಜ್ಞಾನಾನುಭವದ ಒಂದೊಂದು ಮುಖವನ್ನೂ ಪಡೆದು ಕಾದಿಟ್ಟಿದ್ದ ಅವರ ಆಪ್ತಶಿಷ್ಯರಿಂದ ಉಪದೇಶ ದೊರಕಿ, ಆ ಮೂಲಕ ಯಾಮುನರ ಅನುಗ್ರಹವು ಪೂರ್ಣವಾಗಿ ರಾಮಾನುಜರಿಗೆ ದೊರಕಿತೆಂದು ಹೇಳಬಹುದು.

ತಾಯಿಯಾದ ಕಾಂತಿಮತಿಯು ಮರಣ ಹೊಂದುದರಿಂದ, ಪತಿಪತಿಯರಲ್ಲಿ ಭಿನ್ನತೆ ಹೆಚ್ಚಿತು. ಕಾಂಚೀಪೂರ್ಣ ಮತ್ತು ಮಹಾಪೂರ್ಣರಿಬ್ಬರಿಗೂ ಪತ್ನಿಯ ಕಾರಣದಿಂದ ಸರಿಯಾದ ಗೌರವ ಸಲ್ಲಿಸಲಾಗದೆ, ರಾಮಾನುಜರು ಆಧ್ಯಾತ್ಮಿಕ ಸಾಧನೆಗೆ ಹಾಗೂ ನೂತನ ಸಿದ್ಧಾಂತ ಪ್ರಚಾರಕ್ಕೆ ಅಡ್ಡಿ ಎನಿಸಿದ್ದ ಗೃಹಸ್ಥ ಜೀವನವನ್ನು ತೊರೆದು, ಲೋಕೋದ್ಧಾರಕ್ಕೆ ಅವಶ್ಯವಾದ ಸಂನ್ಯಾಸವನ್ನು ವರದರಾಜಸ್ವಾಮಿಯ ಸನ್ನಿಧಿಯಲ್ಲಿ ಸ್ವೀಕರಿಸಿ ಯತಿರಾಜರೆನಿಸಿದರು.

ವರದರಾಜಸ್ವಾಮಿಯ ಆದೇಶದಂತೆ, ತಮಗಿಂತ ಜಾತಿಯಲ್ಲಿ ಕೀಳಾಗಿದ್ದರೂ, ಆಧ್ಯಾತ್ಮಿಕತೆಯಲ್ಲಿ ಮೇಲಾಗಿದ್ದ ಪೆರಿಯನಂಬಿಗಳನ್ನು ರಾಮಾನುಜರು ಗುರುವಾಗಿ ಸ್ವೀಕರಿಸಿದರು. ಅವರಿಂದ ವಿಶಿಷ್ಟಾದ್ವೈತದ ಗೂಢತತ್ತ್ವ ರಹಸ್ಯಗಳನ್ನು ತಿಳಿದರು.

ಇವರ ಆದೇಶದಂತೆ ಬಹು ಕಷ್ಟಪಟ್ಟು ಗೋಷ್ಠೀಪೂರ್ಣರನ್ನು ಒಲಿಸಿಕೊಂಡು ಅವರಿಂದ ತಿರುಮಂತ್ರವನ್ನು ಕಲಿತರು. ಯಾವ ಮಂತ್ರವನ್ನು ಜಪಿಸುವುದರಿಂದ ಹಾಗೂ ಶ್ರವಣಮಾಡುವುದರಿಂದ ಭವದ ಕಷ್ಟಗಳೆಲ್ಲವೂ ತೊಲಗಿ, ಜೀವನದಲ್ಲಿ ಸುಖ, ಶಾಂತಿಗಳು ಲಭಿಸಿ, ಅಂತ್ಯದಲ್ಲಿ ಮುಕ್ತಿ ದೊರಕುವುದೋ, ಅದನ್ನು ಗುಪ್ತವಾಗಿಟ್ಟುಕೊಳ್ಳಬಾರದೆಂದು ತೀರ್ಮಾನಿಸಿ, ಎಲ್ಲರಿಗೂ ಉಪದೇಶಿಸಿಬಿಟ್ಟರು. ಗುರುಗಳು ರಾಮಾನುಜರ ಬಗ್ಗೆ ಮೊದಲು ಬಹಳ ಕೋಪಗೊಂಡರೂ, ಆಮೇಲೆ ಅವರ ಔದಾರ್ಯ, ಕಾರುಣ್ಯಗಳನ್ನು ಮೆಚ್ಚಿಕೊಂಡರು. ದೀನರ ಹಾಗೂ ಪಾಪಿಗಳ ಉದ್ಧಾರವಾಗಿ ಅವರಿಗೆಲ್ಲ ಮುಕ್ತಿ ಲಭಿಸುವುದಾದರೆ, ತಾನು ನರಕದಲ್ಲಿ ಕಷ್ಟಪಡಲು ಸಿದ್ಧ ಎನ್ನುವ ಈ ಭಾವನೆಯೇ, ರಾಮಾನುಜರನ್ನು ವಿಶ್ವದ ಶ್ರೇಷ್ಠತಮ ವ್ಯಕ್ತಿಗಳ ಸಾಲಿಗೆ ಸೇರಿಸಲು ಕಾರಣವಾಯಿತು.

ಗುರುಗಳ ಸಲಹೆಯಂತೆ, ನಮ್ಮಾಳ್ವಾರರ ಪ್ರಬಂಧಗಳಲ್ಲಿ ವಿಶೇಷ ಪ್ರಾವಿಣ್ಯತೆಯನ್ನು ಪಡೆದಿದ್ದ ಮಾಲಾಧರರಲ್ಲಿ, ರಾಮಾನುಜರು ದಿವ್ಯ ಪ್ರಬಂಧಗಳ ವಿಶೇಷಾರ್ಥಗಳನ್ನು ಕಲಿಯಲಾರಂಭಿಸಿದರು. ಅಲ್ಲಲ್ಲಿ ಗುರುಗಳ ವ್ಯಾಖ್ಯಾನ ಸರಿಯಿಲ್ಲವೆಂದು ರಾಮಾನುಜರಿಗೆ ಅನಿಸಿದಾಗ, ತಮ್ಮ ಅತೃಪ್ತಿಯನ್ನು ತೋರಿಸಿ, ತಮಗೆ ತೋರಿದ ಅರ್ಥವಿವರಣೆಯನ್ನು ಕೊಡುತ್ತಿದ್ದರು. ಮೊದಲು ಅಸಮಾಧಾನಗೊಂಡರೂ, ಗೋಷ್ಠೀಪೂರ್ಣರ ಅಪೇಕ್ಷೆಯಂತೆ ಪಾಠವನ್ನು ಮುಂದುವರಿಸಿ, ಕೊನೆಗೆ ನಮ್ಮಾಳ್ವಾರ್, ನಾಥಮುನಿ, ಯಾಮುನ ಇವರುಗಳ ಅಭಿಪ್ರಾಯವು ತಮಗಿಂತ ರಾಮಾನುಜರಿಗೆ ಚೆನ್ನಾಗಿ ತಿಳಿದಿದೆ ಎಂಬುದನ್ನು ಅವರೂ ಅರಿತುಕೊಂಡರು. ಗುರುಗಳಿಗೆ ಅಪಚಾರವಾಗುವುದೆಂಬ ಭಯದಿಂದ, ರಾಮಾನುಜರು ಪ್ರಬಂಧಗಳ ಬಗ್ಗೆ ತಾವು ಹೊಂದಿದ್ದ ಅಭಿ

ಪ್ರಾಯಗಳನು ತಾವೇ ಬರೆಯದೆ, ತಮ್ಮ ಶಿಷ್ಯ ಪಿಳ್ಳಾನ್‌ರವರಿಂದ ಬರೆಸಿದರು.

ಅನಂತರ ಶ್ರೀರಂಗದಲ್ಲಿದ್ದ ಆಳವಂದಾ ರಾಳ್ವಾನ್ ಅಥವಾ ವರರಂಗನಾಯಕರಿಗೆ ಸೇವೆ, ಶುಶ್ರೂಷೆಮಾಡಿ, ರಾಮಾನುಜರು ಅವರಿಂದ ದಿವ್ಯ ಪ್ರಬಂಧದ ಮೂಲವನ್ನೂ, ಆಚಾರ್ಯಾಭಿಮಾನದ ಲಕ್ಷಣಗಳನ್ನೂ ಗ್ರಹಿಸಿದರು.

ಸೋದರಮಾವ ಶ್ರೀಶೈಲಪೂರ್ಣರಲ್ಲಿ ಕಾಲಕ್ಷೇಪಮಾಡಿ ಪ್ರಪತ್ತಿವೇದ ಅಥವಾ ಶರಣಾಗತಿ ಶಾಸ್ತ್ರ ಎನಿಸಿದ ರಾಮಾಯಣದ ಗೂಢಾರ್ಥವನ್ನರಿತರು. ಹೀಗೆ ಯಾಮುನರ ಐವರು ಮುಖ್ಯ ಶಿಷ್ಯರಿಂದ ಉಪದೇಶ ಪಡೆದ ರಾಮಾನುಜರು, ಆ ಮೂಲಕ ಪಂಚಾಚಾರ್ಯ ಪದಾಶ್ರಯರೆನಿಸಿ ಪ್ರಖ್ಯಾತರಾದರು. ಆಚಾರ್ಯ ಯಾಮುನರ ಆಜ್ಞೆಯನ್ನು ಪಾಲಿಸಿ, ಐವರು ಆಚಾರ್ಯರೂ ರಾಮಾನುಜರ ಸಂಪರ್ಕದಿಂದ ತಾವು ಕೃತಾರ್ಥರಾದೆವೆಂದೇ ಭಾವಿಸಿದರು.

ಹೀಗೆ ಒಬ್ಬೊಬ್ಬ ಆಚಾರ್ಯರಿಂದ ವಿಶಿಷ್ಟಾದ್ವೈತದ ಒಂದೊಂದು ರಹಸ್ಯವನ್ನು ಒಂದೊಂದು ರೀತಿಯಲ್ಲಿ ಪಡೆದುಕೊಂಡ ರಾಮಾನುಜರು, ಅವುಗಳನ್ನೆಲ್ಲಾ ತಮ್ಮ ಅನುಷ್ಠಾನಾದಿಗಳಿಂದ ದೃಢಪಡಿಸಿಕೊಂಡು, ಸಿದ್ಧಾಂತದ ರಕ್ಷಣೆ–ಪ್ರಚಾರಗಳಿಗೆ ಅವಶ್ಯಕವಾದ ಶಕ್ತಿ–ಸಾಮರ್ಥ್ಯಗಳನ್ನು ಸಂಪಾದಿಸಿಕೊಂಡು, ಅನಂತರ ತಮ್ಮ ಕೃತಿಗಳಲ್ಲಿ ತತ್ತ್ವ, ಹಿತ, ಪುರುಷಾರ್ಥಗಳನ್ನೆಲ್ಲ ಹೃದಯಂಗಮವಾಗಿ ನಿರೂಪಿಸಿದ್ದಾರೆ. ರಾಮಾನುಜರ ಈ ಕಾರ್ಯದಲ್ಲಿ ಅವರ ಆಪ್ತಶಿಷ್ಯರಾದ ಕೂರೇಶ, ದಾಶರಥಿ ಇಬ್ಬರ ಸೇವೆಯು, ಅಪಾರ ಹಾಗೂ ಅಸದೃಶ.

ರಾಮಾನುಜರು ಕೂರೇಶರ ನೆರವಿನಿಂದ ಬ್ರಹ್ಮಸೂತ್ರಗಳಿಗೆ ವಿಶಿಷ್ಟಾದ್ವೈತ ಪರವಾದ ಶ್ರೀಭಾಷ್ಯವನ್ನು ತಾವೇ ರಚಿಸಿದರು; ಕೂರೇಶರ ಮಗನಿಗೆ ಪರಾಶರನೆಂದು ಹೆಸರಿಟ್ಟು, ಅವರಿಂದ ವಿಷ್ಣು ಸಹಸ್ರನಾಮಕ್ಕೆ ವ್ಯಾಖ್ಯಾನ ಬರೆಸಿದರು; ಶ್ರೀಶೈಲಪೂರ್ಣರ ಮಗನಿಗೆ ಕುರುಕೇಶನೆಂದು ಹೆಸರಿಟ್ಟು, ಅವರಿಂದ ತಿರುವಾಯ್ಮೊಳಿಗೆ ಭಾಷ್ಯವನ್ನು ಬರೆಸಿದರು. ಹೀಗೆ ಯಾಮುನರ ಅಂತಿಮೇಚ್ಛೆಯನ್ನು ಪೂರೈಸಿ, ಅವರ ಶವದ ಮುಂದೆ ಮಾಡಿದ ತಮ್ಮ ಪ್ರತಿಜ್ಞೆಯನ್ನು ಪೂರ್ಣಗೊಳಿಸಿದರು.

ರಾಮಾನುಜರು, ಅತ್ಯುತ್ತಮವಾದ ಒಂಬತ್ತು ಧರ್ಮಗ್ರಂಥಗಳನ್ನು ರಚಿಸುವುದರ ಮೂಲಕ, ವಿಶಿಷ್ಟಾದ್ವೈತ ಸಿದ್ಧಾಂತಕ್ಕೆ ಅನೋಘವಾದ ಸೇವೆಯನ್ನು ಸಲ್ಲಿಸಿದ್ದಾರೆ. ಶ್ರೀಭಾಷ್ಯ, ವೇದಾರ್ಥ ಸಂಗ್ರಹ, ವೇದಾಂತ ದೀಪ, ವೇದಾಂತಸಾರ, ಗೀತಾಭಾಷ್ಯ, ಶರಣಾಗತಿ ಗದ್ಯ, ಶ್ರೀರಂಗ ಗದ್ಯ, ಶ್ರೀ ವೈಕುಂಠ ಗದ್ಯ, ನಿತ್ಯಗ್ರಂಥ – ಇವು ರಾಮಾನುಜರ ಕೃತಿಗಳು.

ಶ್ರೀಭಾಷ್ಯವು ಬಹು ಮುಖ್ಯವಾದುದು. ಇದರಲ್ಲಿ ಸಂಪ್ರದಾಯದ ಜಾಡನ್ನೇ ಹಿಡಿದು ಹೊಸ ರೀತಿಯಲ್ಲಿ ಹಳೆಯ ಅರ್ಥವನ್ನು ಸಮಗ್ರವಾಗಿ ಸಮನ್ವಯಗೊಳಿಸಲಾಗಿದೆ. ಇದು ರಾಮಾನುಜರ ಪಾಂಡಿತ್ಯಕ್ಕೆ ಉತ್ಕೃಷ್ಟವಾದ ಉದಾಹರಣೆಯಾಗಿರುವ ಗ್ರಂಥ. ಎರಡನೆಯ ರಾಮಮಿಶ್ರರ ಶ್ರೀಭಾಷ್ಯ ವಿವರಣ, ಸುದರ್ಶನ ಸೂರಿಗಳ ಶ್ರುತ ಪ್ರಕಾಶಿಕೆ, ವಾತ್ಸ್ಯ ವರದಾಚಾರ್ಯರ ತತ್ತ್ವಸಾರ, ವೇದಾಂತ ದೇಶಿಕರ ತತ್ತ್ವ ಟೀಕೆ, ಮೇಘನಾದಾರಿ ಸೂರಿಗಳ ನಯಪ್ರಕಾಶಿಕೆ, ವೀರ ರಾಘವದಾಸರ ತಾತ್ಪರ್ಯ ದೀಪಿಕೆ, ಪರಕಾಲ ಸ್ವಾಮಿಗಳ ಮಿತಪ್ರಕಾಶಿಕೆ – ಇವು ಶ್ರೀಭಾಷ್ಯದ ಗೂಢಾರ್ಥಗಳನ್ನು ವಿವರಿಸುವ ಸಲುವಾಗಿ ವಿವಿಧ ಕಾಲಗಳಲ್ಲಿ ರಚಿಸಲ್ಪಟ್ಟ ವೃತ್ತಿ ಗ್ರಂಥಗಳು.

ಗ್ರಂಥ ರಚನೆಯಾದ ಮೇಲೆ ರಾಮಾನುಜರು ತಮ್ಮ ಶಿಷ್ಯರೊಡನೆ ತಮ್ಮ ನೂತನ ಪಂಥವು ಎಲ್ಲರಿಗೂ ಸಿಗಬೇಕೆಂಬ ಉದ್ದೇಶದಿಂದ, ಧಾರ್ಮಿಕ ಯಾತ್ರೆಗೆ ಹಾಗೂ ಧರ್ಮ ದಿಗ್ವಿಜಯಕ್ಕೆ ಹೊರಟರು. ಭಾರತದಲ್ಲೆಲ್ಲ ಇರುವ ಪವಿತ್ರ ತೀರ್ಥಕ್ಷೇತ್ರಗಳನ್ನು ಸಂದರ್ಶಿಸಿ, ಭಗವಂತನ ಸೇವೆ ಮಾಡಿದರು. ಹೋದೆಡೆಗಳಲ್ಲೆಲ್ಲ ವಿದ್ವತ್ಸಭೆಗಳಲ್ಲಿ ವಾದಮಾಡಿ, ತಮ್ಮ ನೂತನ ಸಿದ್ಧಾಂತದ ರಹಸ್ಯಗಳನ್ನೆಲ್ಲ ವಿವರಿಸಿ, ಶೈವ ಮತ್ತು ಜೈನ ಪಂಥದ ಅನೇಕರನ್ನು ಶ್ರೀವೈಷ್ಣವರನ್ನಾಗಿ ಪರಿವರ್ತಿಸಿದರು. ತಮ್ಮ ಮಾರ್ಗಕ್ಕಿಂತ ಭಿನ್ನವಾಗಿದ್ದರೂ, ರಾಮಾನುಜರ ಧರ್ಮಶ್ರದ್ಧೆ, ಸ್ವಮತ ನಿಷ್ಠೆ, ತತ್ತ್ವ ಪ್ರಸಾರದಲ್ಲಿ ಅವರಿಗಿದ್ದ ಅದಮ್ಯ ಉತ್ಸಾಹಗಳನ್ನು ಅನೇಕ ವಿದ್ವಾಂಸರು ಕೊಂಡಾಡಿ, ಅವರ ನವೀನ ಮತವನ್ನು ಮೆಚ್ಚಿದರು. ಇವರ ಪಾಂಡಿತ್ಯ, ಪ್ರತಿಭೆ, ಭಕ್ತಿ, ಶೀಲಗಳನ್ನು ನೋಡಿದ ಸಾವಿರಾರು ಆಸ್ತಿಕರು ಇವರ ಶಿಷ್ಯರಾದರು. ತೊಂಡನೂರು ನಂಬಿ ಎಂಬ ಶಿಷ್ಯನ ಅಪೇಕ್ಷೆಯಂತೆ, ಹಿಂದೆ ಚಾಳುಕ್ಯ ದೊರೆ ವೀರರಾಜೇಂದ್ರನ ಮಗಳಿಗೆ ಗುಣಪಡಿಸಿದಂತೆ, ಹೊಯ್ಸಳ ರಾಜ ಬಿಟ್ಟದೇವನ ಮಗಳಿಗೂ ಗುಣಪಡಿಸಿ, ರಾಜನಿಗೆ ಶ್ರೀವೈಷ್ಣವ ದೀಕ್ಷೆಯನ್ನಿತ್ತು ವಿಷ್ಣುವರ್ಧನನೆಂದು ಕರೆದರು. ಮೇಲುಕೋಟೆಯ ದೇವಾಲಯವನ್ನು ಜೀರ್ಣೋದ್ಧಾರ ಮಾಡಿಸಿದರು. ಹೀಗೆ ಇದರಿಂದ ಅನೇಕ ಸ್ಥಳಗಳಲ್ಲಿ ವಿಷ್ಣುದೇವಾಲಯಗಳ ನಿರ್ಮಾಣ, ಅವುಗಳ ಪೂಜಾವ್ಯವಸ್ಥೆ, ಶ್ರೀವೈಷ್ಣವ ಮಠಗಳ ಸ್ಥಾಪನೆ ಆಯಿತು.

ಸಂಸ್ಕೃತ ವೇದಾಂತ ಮತ್ತು ತಮಿಳು ಪ್ರಬಂಧ ಎರಡೂ ಸಮರಸವುಳ್ಳವು ಎಂದು ಪ್ರತಿಪಾದಿಸಿ, ಸಂಸ್ಕೃತದ ಶ್ರುತಿಯ ಜೊತೆಗೆ, ತಮಿಳಿನ ಆಳ್ವಾರುಗಳ ಅನುಭವಗಳಿಗೂ ಪ್ರಾಧಾನ್ಯವನ್ನು ಕೊಟ್ಟು, ಎರಡೂ ಭಾಷೆಗಳಲ್ಲಿ ವಿಶಿಷ್ಟಾದ್ವೈತ ನಿಲ್ಲುವಂತೆ ಮಾಡಿ, ಉಭಯ ವೇದಾಂತದ ಸಿಂಹಾಸನಾಧಿಪತಿ ಎನಿಸಿಕೊಂಡು, ತಮ್ಮ ನೂತನ ಸಿದ್ಧಾಂತಕ್ಕೆ 'ಎಂಬೆರುಮಾನಾರ್ ದರ್ಶನಂ' ಅಥವಾ 'ರಾಮಾನುಜ ದರ್ಶನ' ಎಂದು ಹೆಸರು ಬರುವಂತೆ ಮಾಡಿದರು.

ನೂರಿಪ್ಪತ್ತು ವರ್ಷಗಳ ತುಂಬು ಜೀವನವನ್ನು ನಡೆಸಿದ ರಾಮಾನುಜರು, ತಮ್ಮ ಶ್ರೇಷ್ಠವಾದ ತ್ಯಾಗಮಯ ಜೀವನ–ಕೆಲಸಗಳಿಂದ, ಇತಿಹಾಸ ನಿರ್ಮಾಪಕರೆನಿಸಿದ್ದಾರೆ ಎಂದರೆ ಅತಿಶಯೋಕ್ತಿಯಾಗಲಾರದು.

(ಕೃಪೆ : ಶ್ರೀರಾಮಾನುಜಸಿದ್ಧಾಂತ ದರ್ಪಣ)

---

(೩ನೇ ಪುಟದಿಂದ)

ಭೂಪಾದಾ ಯಸ್ಯನಾಭಿಃ ವಿಯದಸುರ
ನಿಲಶ್ಚಂದ್ರಸೂರ್ಯೌ ಚ ನೇತ್ರೇ
ಕರ್ಣಾವಾಶಾಃ ಶಿರೋದ್ಯೌಃ ಮುಖಮಪಿ
ದಹನೋ ಯಸ್ಯವಾಸ್ತೇಯಮಬ್ಧಿಃ।
ಅಂತಸ್ಥಂ ಯಸ್ಯವಿಶ್ವಂ ಸುರನರ
ಖಗಗೋ ಭೋಗಿಗಂಧರ್ವ ದೈತ್ಯೈಃ
ಚಿತ್ರಂ ರಂರಮ್ಯತೇ ತಂ ತ್ರಿಭುವನ
ವಪುಷಂ ವಿಷ್ಣುಮೀಶಂ ನಮಾಮಿ ॥

ಇಂತಹ ವಿಶ್ವೇಶನಾದ ವಿಷ್ಣುವನ್ನು ಪ್ರತಿದಿನವೂ ಧ್ಯಾನಿಸುವುದರಿಂದ;

ಆರ್ತಾಃ ವಿಷಣ್ಣಾ ಶಿಥಿಲಾಶ್ಚ ಭೀತಾಃ
ಘೋರೇಷು ಚ ವ್ಯಾಧಿಷು ವರ್ತಮಾನಾಃ
ಸಂಕೀರ್ತ್ಯ ನಾರಾಯಣ ಶಬ್ದಮಾತ್ರಂ
ವಿಮುಕ್ತ ದುಃಖಾಃ ಸುಖಿನೋ ಭವಂತಿ



---

ಆಧಾರ: ಶ್ರೀ ವಿಷ್ಣು ಸಹಸ್ರನಾಮಭಾಷ್ಯ.
ಶ್ರೀ ಎಚ್.ಎಸ್. ವರದ ದೇಶಿಕಾಚಾರ್ಯ
ರಂಗಪ್ರಿಯ

# ವಾರ್ತಾವಳಿ

## ವಸಂತೋತ್ಸವ

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರ ಸ್ವಾಮಿಯವರ ವಸಂತೋತ್ಸವವು ಏಪ್ರಿಲ್ ತಿಂಗಳ 3 ರಿಂದ 5 ರವರೆಗೆ ನಡೆಯುತ್ತದೆ. 3–4–85 ರಂದು (ಬುಧವಾರ) ರಾತ್ರಿ ಶ್ರೀ ವೆಂಕಟೇಶ್ವರಸ್ವಾಮಿಯ ವಸಂತೋತ್ಸವ ನಡೆದು, ಮಾರನೆಯದಿನ 4–4–85 ರ ಗುರುವಾರ ಚೈತ್ರಪೂರ್ಣಿಮೆಯಂದು ಶ್ರೀ ವೆಂಕಟೇಶ್ವರಸ್ವಾಮಿಯ ರಜತ ರಥೋತ್ಸವ ನಡೆಯುವುದು. 5–4–85 ರಂದು ಶುಕ್ರವಾರ ಶ್ರೀ ವೆಂಕಟೇಶ್ವರಸ್ವಾಮಿ, ಶ್ರೀ ಕೋದಂಡ ರಾಮಸ್ವಾಮಿ, ಶ್ರೀ ಕೃಷ್ಣರುಗಳ ವಸಂತೋತ್ಸವ ನಡೆಯುವುದು.

## ನಾಗಲಾಪುರಂ ಬ್ರಹ್ಮೋತ್ಸವ

ತಿ. ತಿ. ದೇ, ಗಳ ಪರಿಪಾಲನೆಯಲ್ಲಿರುವ ನಾಗಲಾಪುರಂನ ಶ್ರೀ ವೇದನಾರಾಯಣ ಸ್ವಾಮಿ ಬ್ರಹ್ಮೋತ್ಸವವು 2–5–85 ರಿಂದ 11–5–85 ರವರೆಗೆ ನಡೆಯುತ್ತದೆ. ನಾಗಲಾಪುರಂನ ಶ್ರೀ ವೇದನಾರಾಯಣಸ್ವಾಮಿಯ ಬ್ರಹ್ಮೋತ್ಸವದಲ್ಲೂ, ಎಲ್ಲ ಇತರ ತಿ.ತಿ.ದೇ. ಬ್ರಹ್ಮೋತ್ಸವಗಳಂತೆಯೇ ವಿವಿಧ ವಾಹನ ಸೇವೆಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆಯುವುವು. 7–5–85 ರಂದು ಗರುಡೋತ್ಸವವೂ ನಡೆಯುವುದು. ನಾಗಲಾಪುರಂ ತಿರುಪತಿಯಿಂದ 45 ಕಿಲೋ ಮೀಟರ್ ದೂರದಲ್ಲಿದ್ದು ತಿರುಪತಿಯಿಂದ ವಿಶೇಷ ಬಸ್ ವ್ಯವಸ್ಥೆಯನ್ನು ಹೊಂದಿದೆ.

## ವಿಕಲಾಂಗರಿಗಾಗಿ ಕಟ್ಟಡ ಸಮುದಾಯ

ತಿರುಪತಿಯಲ್ಲಿನ ತಿ. ತಿ. ದೇ. ಮೂಗ ಬಧಿರಾಂಧ ಪಾಠಶಾಲೆಯ ಕಟ್ಟಡಕ್ಕೆ ಎರಡು ಅಂತಸ್ತುಗಳ ಹೊಸ ಕಟ್ಟಡವೊಂದನ್ನು ಹೊಸದಾಗಿ ಸೇರಿಸಲಾಗುವುದು. ಸುಮಾರು 5.5 ಲಕ್ಷರೂಗಳ ವೆಚ್ಚದ ಈ ಅಧಿಕ ಕಟ್ಟಡಕ್ಕೆ ಆಂಧ್ರಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ಶ್ರಾವಣಕುಮಾರ್ ಅವರು ಈಚೆಗೆ ಶಂಕುಸ್ಥಾಪನೆ ಮಾಡಿದರು.

ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಶಂಕುಸ್ಥಾಪನಾ ಸಭೆಯಲ್ಲಿ ಮುಖ್ಯ ಕಾರ್ಯದರ್ಶಿಗಳು ಮೂವತ್ತೊಂದು ಮಂದಿಗೆ ಕೇಳುಯಂತ್ರಗಳನ್ನು ವಿತರಿಸಿದರು.

ತಿ. ತಿ. ದೇ. ಪೌರಸಂಬಂಧಾಧಿಕಾರಿ ಡಾ॥ ರಾವುಲಸೂರ್ಯನಾರಾಯಣ ಮೂರ್ತಿ ಅವರು ಸಭೆಯನ್ನು ಸ್ವಾಗತಿಸಿದರು.

## ಶೀಘ್ರದಲ್ಲಿ ವಜ್ರಕಿರೀಟ

ಶ್ರೀ ವೆಂಕಟೇಶ್ವರಸ್ವಾಮಿಯ ಹೊಸ ವಜ್ರ ಕಿರೀಟದ ಕೆಲಸ ತಿರುಪತಿಯಲ್ಲಿ ಆರಂಭವಾಗಿದೆ. ಬೆಂಗಳೂರಿನ ಸೂರಜಮಲ್ ಡೈಮಂಡ್ಸ್ ಪ್ರೈವೇಟ್ ಲಿಮಿಟೆಡ್ ಅವರು ಸುಮಾರು 7 ಲಕ್ಷ ರೂಗಳ ನಿರ್ಮಾಣ ವೆಚ್ಚದ ಕಿರೀಟದ ಕೆಲಸವನ್ನು ಉಚಿತವಾಗಿ ಮಾಡಿಕೊಡಲು ಮುಂದೆ ಬಂದದ್ದನ್ನು ಒಪ್ಪಿದ್ದು, ಈ ಕಿರೀಟ ನಿರ್ಮಾಣದ ಕೆಲಸ ಔಪಚಾರಿಕವಾಗಿ ಆಂಧ್ರ ಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ಶ್ರಾವಣಕುಮಾರ್ ಅವರು ಆರಂಭಿಸಿದರು. ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಕಾರ್ಯಾರಂಭ ಸಭೆಯಲ್ಲಿ ಸೂರಜ್‌ಮಲ್ಸ್‌ನ ನಿರ್ದೇಶಕ ಶ್ರೀ ದಿಲೀಪ್ ಮೆಹತಾ ಅವರು ಮಾತನಾಡುತ್ತ ತಮ್ಮ ತಂದೆ ಶ್ರೀ ಪ್ರವೀಣ್ ಮೆಹತಾ ಅವರು ಈ ಹಿಂದೆ 1947 ರಲ್ಲಿ ಶ್ರೀವೆಂಕಟೇಶ್ವರಸ್ವಾಮಿಯ ಕಿರೀಟ ನಿರ್ಮಾಣದಲ್ಲಿ ಕೆಲಸಮಾಡಿದ್ದರೆಂದೂ, ಭಕ್ತಿ ಭಾವದಿಂದ ತಾವೂ ಉಚಿತವಾಗಿಯೇ ಈ ಕಾರ್ಯವನ್ನು ನಿರ್ವಹಿಸುವುದಾಗಿಯೂ ತಿಳಿಸಿದರು.

ತಿ. ತಿ. ದೇ. ಈ ಕಿರೀಟ ನಿರ್ಮಾಣಕ್ಕಾಗಿ ಟೆಂಡರ್‌ಗಳನ್ನು ಕರೆದಾಗ ನಾಲ್ಕು ಟೆಂಡರ್‌ಗಳು ಬಂದವಾದರೂ, ಒಂದೂವರೆ ಲಕ್ಷರೂಗಳ ವೆಚ್ಚದಲ್ಲಿ ಮಾಡಲಾದ ಮಾದರಿ ಕಿರೀಟವು ಸೂರಜ್‌ಮಲ್ ಅವರಿಂದ ಮಾತ್ರವೇ ಬಂದಿತ್ತು. ಈ ಮಾದರಿ ಕಿರೀಟವನ್ನು ಆಂಗ್ಲ ಚಿತ್ರಕಾರ ಮಾರ್ಕ್ ವಾಕರ್ ಅವರು ಚಿತ್ರಿಸಿದ ನಮೂನೆಯಂತೆ ಮಾಡಲಾಗಿದ್ದಿತು. ತಿ. ತಿ. ದೇ. ಕಿರೀಟ ನಿರ್ಮಾಣಕ್ಕೆ ಈ ಮಾದರಿಯನ್ನು ಒಪ್ಪದಹೋದರೂ ಸಹ ಈ



ಶ್ರೀ ವೆಂಕಟೇಶ್ವರ ಸ್ವಾಮಿಗಾಗಿ ಹೊಸದಾಗಿ ತಯಾರಿಸಲಾಗುವ ವಜ್ರಕಿರೀಟದ ಮಾದರಿ. ಪಕ್ಕದಲ್ಲಿರುವ ಸಣ್ಣ ಕಿರೀಟ ಸೂರಜ್ ಮಲ್ಸ್‌ರವರು 1.5 ಲಕ್ಷರೂಗಳ ವೆಚ್ಚದಲ್ಲಿ ತಯಾರಿಸಿ ಕಾಣಿಕೆಯಾಗಿ ನೀಡಿದ ಕಿರೀಟದ – ಮಾದರಿ.



ಮೂಗ ಬಧಿ ಪಾಠಶಾಲೆಯ ಹೆಚ್ಚುವರಿ ಕಟ್ಟಡದ ಶಂಕುಸ್ಥಾಪನಾ ಸಭೆಯಲ್ಲಿ ಮಾತನಾಡುತ್ತಿರುವ ಆಂಧ್ರ ಪ್ರದೇಶದ ಮುಖ್ಯಕಾರ್ಯದರ್ಶಿ ಶ್ರೀ ಶ್ರಾವಣಕುಮಾರ್. ಬಲಗಡೆ ಕುಳಿತಿರುವವರು ತಿ. ತಿ. ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎಸ್. ಲಕ್ಷ್ಮೀನಾರಾಯಣ ಅವರು.

ಮಾದರಿಯನ್ನೂ ಸೂರಜ್ ಮಲ್ಸ್ ಅವರು ಶ್ರೀ ವೆಂಕಟೇಶ್ವರಸ್ವಾಮಿಗೆ ಕಾಣಿಕೆಯಾಗಿ ಅರ್ಪಿಸಿದ್ದಾರೆ.

## ತಿರುಮಲೆಯಲ್ಲಿ ಹೊಸ ವಸತಿಗೃಹ

ತಿರುಮಲೆಯಲ್ಲಿ 12 ಲಕ್ಷರೂಗಳ ವೆಚ್ಚದಲ್ಲಿ ನಿರ್ಮಿಸಲಾದ ಗರುಡಾದ್ರಿ ಯಾತ್ರಿಕ ವಸತಿ ಗೃಹಗಳನ್ನು ಈಚೆಗೆ ಆಂಧ್ರಪ್ರದೇಶದ ಮುಖ್ಯ ಕಾರ್ಯದರ್ಶಿ ಶ್ರೀ ಶ್ರಾವಣಕುಮಾರ್ ಅವರು ಉದ್ಘಾಟನೆ ಮಾಡಿದರು. ಇದರಿಂದ ಯಾತ್ರಿಕರಿಗೆ ವಸತಿ ಸೌಲಭ್ಯದಲ್ಲಿ ಹೆಚ್ಚಳ ವುಂಟಾಗಿರುವಂತಾಗಿದೆ. ಮೂರು ಅಂತಸ್ತುಗಳ ಈ ಕಟ್ಟಡದಲ್ಲಿ ಒಂದು ಅಂತಸ್ತಿಗೆ 8 ಕೋಣೆಗಳಂತೆ ಒಟ್ಟು 24 ಕೋಣೆಗಳಿದ್ದು, ಪ್ರತಿಯೊಂದೂ ಸ್ನಾನ ಶೌಚಾಗಾರಗಳು, ಮಂಚ, ಕುರ್ಚಿ ಮೇಜುಗಳಿಂದ ಸುಸಜ್ಜಿತವಾಗಿರುತ್ತವೆ. ಇಲ್ಲಿನ ಕೊಟಡಿಗಳನ್ನೂ ಯಾತ್ರಿಕರು ಇತರತ್ರ ಬಾಡಿಗೆಗೆ ಪಡೆಯುವಂತೆಯೇ ನಾಮಮಾತ್ರ ಬಾಡಿಗೆಗೆ ಪಡೆಯಬಹುದೆಂದು ತಿಳಿಸಲಾಗಿದೆ.

## ಅಖಿಲ ಕರ್ನಾಟಕ ಕೀರ್ತನಕಾರರ ಸಮ್ಮೇಳನ

ಅಖಿಲ ಕರ್ನಾಟಕ ಕೀರ್ತನ ಕಲಾಪರಿಷತ್‌ನವರು ಯೋಜಿಸಿದ ಮೂರುದಿನಗಳ ಕೀರ್ತನಕಾರರ ಸಮ್ಮೇಳನ ಬೆಂಗಳೂರಿನಲ್ಲಿ ಮಾರ್ಚ್ 6, 7, 8, ರಂದು ಯಶಸ್ವಿಯಾಗಿ ನಡೆಯಿತು.

ದಿನಾಂಕ 6 ರಂದು ನಡೆದ ಉದ್ಘಾಟನಾ ಸಭೆಯನ್ನು ಸ್ವಾಗತಿಸುತ್ತ ಪರಿಷತ್ತಿನ ಕಾರ್ಯದರ್ಶಿ ಶ್ರೀ ಗುರುರಾಜುಲುನಾಯುಡು ಅವರು ಈ ಬಗೆಯ ಸಮ್ಮೇಳನ ನಡೆಯುತ್ತಿರುವುದು ಇದೇ ಮೊದಲ ಬಾರಿಗೆ ಎಂದು ಎಂದು ತಿಳಿಸಿದರು. ಕರ್ನಾಟಕ ಸಂಸ್ಕೃತಿ ಅಭಿವೃದ್ಧಿ ಇಲಾಖೆಯ ನಿರ್ದೇಶಕರಾದ ಶ್ರೀ ಬಿ. ಎಂ. ವಿಠಲಮೂರ್ತಿ ಅವರು ಸಮ್ಮೇಳನವನ್ನು ಉದ್ಘಾಟಿಸುತ್ತ ಇಂದಿನ ಅತಿ ವೇಗದ ನಾಗರಿಕತೆಯ ನಡುವೆ ನಮ್ಮ ಸಾಂಸ್ಕೃತಿಕ ಪರಂಪರೆಯ ಬೆಳವಣಿಗೆ ಮುಖ್ಯವೆಂದೂ, ಆ ದಿಶೆಯಲ್ಲಿ ಇಂತಹ ಸಮ್ಮೇಳನಗಳು ಅವಶ್ಯವೆಂದೂ ಅಭಿಪ್ರಾಯ ಪಟ್ಟರು. ಪರಿಷತ್ತಿನ ಉದ್ದೇಶ ಧ್ಯೇಯ ಧೋರಣೆಗಳನ್ನು ಶ್ರೀ ಭದ್ರಗಿರಿ ಅಚ್ಯುತ ದಾಸರು ವಿವರಿಸಿದರು. ಶ್ರೀ ಹಂಡೇಗುರು ವೇದವ್ಯಾಸ ದಾಸರು ಉಪನ್ಯಾಸ ಮಾಡಿದ ನಂತರ ಕರ್ನಾಟಕದ ಹಿರಿಯ ಕೀರ್ತನಕಾರರಾದ ಸಮ್ಮೇಳನಾಧ್ಯಕ್ಷ ಶ್ರೀ ಟಿ. ಕೆ. ವೇಣುಗೋಪಾಲ ದಾಸರು ಮಾತನಾಡಿದರು. ಶ್ರೀ ಶ್ರೀ ವಿದ್ಯಾಪಯೋನಿಧಿ ತೀರ್ಥ ಶ್ರೀಪಾದಂಗಳು ಆಶೀರ್ವಚನ ನುಡಿದರು.

## ಪುರಂದರ ಸೌರಭ

ದಾಸವರೇಣ್ಯ ಪುರಂದರ ದಾಸರು ಈ ಕಲಿಯುಗದಲ್ಲಿ ಅವತರಿಸಿದ್ದು ಐನೂರು ವರ್ಷಗಳ ಹಿಂದೆ. ಅಂತೆಯೇ ಅವರ ಪಂಚಶತಮಾನೋತ್ಸವವನ್ನು ರಾಷ್ಟ್ರಾದ್ಯಂತ ಆಚರಿಸುವ ಯೋಜನೆ. ಹಾಗಾಗಿ ೧೯೮೫ ರ ಪುರಂದರ ದಾಸರ ಜಯಂತಿ ಉತ್ಸವ ವರ್ಷವು ಹೌದು. ಈ ಉತ್ಸವದಂಗವಾಗಿಯೇ ಎನ್ನುವಂತೆ ದಾಸವರೇಣ್ಯರು ಹೆಚ್ಚಾಗಿ ತಮ್ಮ ಕೊನೆಯ ದಿನಗಳನ್ನು ಕಳೆದ ಹಂಪಿ(ವಿಜಯನಗರ) ಹೊಸಪೇಟೆ ಈಗ ಪ್ರಾಮುಖ್ಯತೆ ಪಡೆದಿದ್ದು, ಇಲ್ಲಿ ರಾಜ್ಯ ಸಂಗೀತ ನೃತ್ಯ ಅಕಾಡೆಮಿ ಆಶ್ರಯದಲ್ಲಿ ಕಳೆದ ತಿಂಗಳು (೯–೨–೮೫) ರಂದು "ಪುರಂದರ ಸೌರಭ" ಎಂಬ ರೂಪಕವನ್ನು ಪ್ರದರ್ಶಿಸಲಾಯಿತು. ಬೆಂಗಳೂರಿನ "ಸ್ವರ ಸಿಂಧು" ಕಲಾವಿದರು ಈ ರೂಪಕವನ್ನು ಪ್ರದರ್ಶಿಸಿದರು. ಏರ್ಪಡಿಸಿದವರು ಹೊಸಪೇಟೆಯ ಕಲಾಪ್ರೇಮಿಗಳ ಸಂಘದವರು.

"ಪುರಂದರ ಸೌರಭ" ಸ್ವರಸಿಂಧುವಿನ ಒಂದು ಅಪೂರ್ವ ಸಾಧನೆ ಎನ್ನಬಹುದು. ಒಂದು ನವೀನ ಪ್ರಯೋಗ ರೂಪಕವನ್ನು ಬರೆದು ದಿಗ್ದರ್ಶಿಸಿದವರು ಪ್ರೊ॥ ಎಂ. ಎಸ್. ನಾಗರಾಜ್. ಈ ರೂಪಕಕ್ಕೆ ಅಳವಡಿಸಿದ ಕೃತಿಗಳೂ ಅಪೂರ್ವವಾದವುಗಳು. ಕೇವಲ ಎರಡು ಕೃತಿಗಳು ( ಏನು ಧನ್ಯಳೋ, ಆಡಿದನೇ ರಂಗ ) ಬಿಟ್ಟರೆ ಉಳಿದವುಗಳಾವುವೂ ಬಳಕೆಯಲ್ಲಿಲ್ಲದವುಗಳು. ಇದು ಕೇವಲ ರೂಪಕವಾಗಿರದೆ ಸಂಗೀತ, ಸಾಹಿತ್ಯ, ಗಮಕ, ನೃತ್ಯ ಎಲ್ಲವನ್ನು ಒಳಗೊಂಡ ಒಂದು ಸಂಗಮವೆನ್ನಬಹುದು.

ಪುರಂದರ ದಾಸರ ೮೦ ವರ್ಷಗಳ ತುಂಬು ಜೀವನದ ಸಮಗ್ರ ಪರಿಚಯ ಅಂದರೆ ೪೦ ವರ್ಷ ವ್ಯಾಪಾರೀ ಜೀವನ, ೪೦ ವರ್ಷ ದಾಸವೃತ್ತಿ ಹಿಡಿದು ಬಿಕ್ಷಾಟನೆ, ಸಾಹಿತ್ಯ ರಚನೆ ಇತ್ಯಾದಿ. ಇಲ್ಲಿ ಪುರಂದರ ದಾಸರು ನಾರದಾಂಶ ಸಂಭೂತರು ಎಂಬುದಕ್ಕೆ ವಿಜಯದಾಸರ ಪಟ್ಟದೀರೂಪದಲ್ಲಿ ರಚಿಸಿರುವ ಪದ್ಯಗಳ ಅಳವಡಿಕೆ ಅತ್ಯಂತ ಸಮಂಜಸ. ರೂಪಕದ ಮುಖ್ಯ ಅಂಶ ನಿರೂಪಣೆ. ಅದನ್ನು ಸ್ವತಃ ರಚನಕಾರರೇ ಅತ್ಯಂತ ಸಮರ್ಪಕವಾಗಿ ನಿರ್ವಹಿಸಿದರು. ಗಮಕ ರೂಪದಲ್ಲಿ ದಾಸರ ಹುಟ್ಟಿನ ವಾಚನ ಎಂ. ಎ. ಜಯರಾಮರಾವ್ ಬಹು ಭಾವುಕತೆಯಿಂದ ಹಾಡಿ ರೂಪಕಕ್ಕೆ ಒಳ್ಳೆ ಬುನಾದಿ ಹಾಕಿದರು.

ಶ್ರೀನಿವಾಸನಾಯಕ ನವಕೋಟಿ ನಾರಾಯಣನಾದರೂ ಅವನಲ್ಲಿ ಯಾವುದೇ ಒಂದು ಅವ್ಯಕ್ತ ಹೊಣೆ, ಅಸಮಧಾನ, ಅತೃಪ್ತಿ ಹೊಗೆಯಾಡುತ್ತಿರುತ್ತದೆ. ಇದಕ್ಕೆ ತಕ್ಕ ಸಮಾಧಾನ ಆತನಿಗೆ ದೊರೆಯುವದಿಲ್ಲ. ವೃದ್ಧ ಬ್ರಾಹ್ಮಣ ಯಾಚನೆಗಾಗಿ ಬರುವ ಈ ಸನ್ನಿವೇಶವನ್ನು ನಾಟಕದ ಒಂದು ದೃಶ್ಯವನ್ನಾಗಿ ಅಳವಡಿಸಿ ರೂಪಕಕ್ಕೆ ಒಂದು ತಿರುವನ್ನು ನೀಡಿದ್ದಾರೆ. ನಾಟಕ ಎಂದಾಕ್ಷಣ ಇಲ್ಲಿ ವಸ್ತ್ರಾಲಂಕಾರವಾಗಲಿ ದೃಶ್ಯಾಲಂಕಾರವಾಗಲಿ ಯಾವುದೂ ಇಲ್ಲ. ಎಲ್ಲವೂ ಸಾಂಕೇತಿಕ. ಪುರಂದರದಾಸರಾಗಿ ಮಾಗೇರಿ ಎಸ್. ರಾಮಚಂದ್ರ, ವೃದ್ಧ ಬ್ರಾಹ್ಮಣನಾಗಿ ಪ್ರೊ॥ ನಾಗರಾಜ ಹಾಗೂ ಮಗ ವರದಪ್ಪನಾಗಿ ಕುಮಾರ ಗುರು ಚೊಕ್ಕವಾಗಿ ಅಭಿನಯಿಸಿದರು : "ಭಂಗಾರವಿಡ ಬಾರೆ" (ನಾರಾಯಣಿ) "ಆವನಾದರೇನು" (ಕಲ್ಯಾಣಿ) "ಏನು ಧನ್ಯಳೋ" (ತೋಡಿ) ಆರೋಗಣೆಯ ಮಾಡೇಳಯ್ಯಾ (ಶ್ರೀ) ಹಾಗೂ "ಇದಕೊಳ್ಳಿ" (ರಾಗಮಾಲಿಕೆ) ಮತ್ತು "ಕುರುಡ ನಾಯಿ" (ಮಿಶ್ರ ಮಾಂಡ್) ಮತ್ತು "ಜಯವದೆ ಜಯವದೆ" (ಜನಪದ ದಾಟಿ) ಸಮರ್ಪಕವಾಗಿ ಕಿವಿಗಿಂಪಾಗುವಂತೆ ರಾಗಗಳನ್ನು ಅಳವಡಿಸಿ ಹಾಡಿದ್ದು ರೂಪಕಕ್ಕೆ ಮೆರಗು ನೀಡಿತು.

ಸಂಗೀತ ನೀಡಿದ ಮಾಗೇರಿ ಎಸ್ ರಾಮಚಂದ್ರ ಅವರ ಜೊತೆಗೆ ಅಂಧ ಕಲಾವಿದ ರಘುನಾಥ ಅಲ್ಲದೆ ಶ್ರೀಕಂಠಯ್ಯ ಶ್ರೀಮತಿಯರಾದ ಪಂಕಜಾ ರಾಮಚಂದ್ರ, ಹರಿಣಿ ಹರಿನಾರಾಯಣ್, ಲಲಿತಾ ಪಂತಲು ಅವರುಗಳು ದೇವರನಾಮಗಳನ್ನು ಹಾಗೂ ಎರಡು ಕೃತಿಗಳನ್ನು ಶಾಸ್ತ್ರೀಯವಾಗಿ ಹಾಡಿದರು. "ಆಡಿದನೆ ರಂಗಾ" ಕೃತಿಗೆ ನೃತ್ಯವನ್ನು ಕುಮಾರಿ ಇಂದಿರಾ ಕಡಂಬಿ ನಿರ್ವಹಿಸಿ ಅತ್ಯಂತ ಭಾವುಕತೆಯ ಅಭಿನಯ ನೀಡಿದಳು.

ವಾದ್ಯದಲ್ಲಿ ಎಚ್. ಭೀಮಾಚಾರ್ (ಪಿಟೀಲು) ಎಸ್. ಪ್ರಕಾಶ (ಮೃದಂಗ) ಚಂದ್ರಾಚಾರ್ ( ಖಂಜಿರ-ತಬಲ ) ಎಚ್. ಎಸ್. ವೇಣುಗೋಪಾಲ್ (ಕೊಳಲು) ಅವರುಗಳು ಉತ್ತಮ ಸಹಕಾರ ನೀಡಿದರು.

ಕರ್ನಾಟಕ ಸಂಗೀತ ಪಿತಾಮಹರೆನಿಸಿದ ದಾಸರ ಕೃತಿಗಳಲ್ಲಿರುವ ಸಂಗೀತದ ನೆಲಗಟ್ಟನ್ನು ಸಮರ್ಪಕವಾಗಿ ಬಳಸಿರುವುದೇ ಅಲ್ಲದೇ ಅವುಗಳ ವೈವಿಧ್ಯತೆಯನ್ನು ಶಾಸ್ತ್ರೀಯ ಸುಗಮ ಜನಪದ ಹಾಗೂ ಗಮಕ ಕಲೆಗಳ ಮೂಲಕ ಬಳಸಿ ಪ್ರಯೋಗಿಸಿರುವದೇ ಅಲ್ಲದೆ, ದಾಸರ ಕೌತುಕಮಯ ಜೀವನದ ಮೇಲೂ ಬೆಳಕು ಬೀರಿರುವ ಈ ರೂಪಕ ಒಂದು ಯಶಸ್ವೀ ಪ್ರದರ್ಶನ ಎನ್ನಬಹುದು.

**ಎಮ್. ಎ. ಜಯರಾಮರಾವ್.**

ಕೃಪೆ : ಕನ್ನಡ ಪ್ರಭ.

ಮುಂದಿನ ಸಂಚಿಕೆಯಲ್ಲಿ .... .... ....

## ಸಪ್ತಗಿರಿ ಮೇ — 1985

**ಅಷ್ಟಶ್ಲೋಕೀ**
– ಬಿ. ಎಸ್. ಮಣಿ

**ಮನುಧರ್ಮಸಾರ**
– ಡಾ॥ ಎಸ್. ಅನಂತರಂಗಾಚಾರ್

**ಚೂತವೃಕ್ಷಚ್ಛಾಯೆಯಲ್ಲಿ**
– ವಿದ್ವಾನ್ ಬ.ನ. ಗುಂಡೂರಾವ್

**ಬಾಗಿಲು ತೆರೆದಿದೆ**
– ಡಿ. ಕೃಷ್ಣಯ್ಯಂಗಾರ್

**ಪಾಂಡ್ಯದೇಶದ ವಿಷ್ಣುಕ್ಷೇತ್ರಗಳು**
– ರಘುಸುತ

**ಜೊತೆಗೇ ಕಿಶೋರ ಜಗತ್, ಗೃಹಲಕ್ಷ್ಮಿ, ಇತ್ಯಾದಿ ಸ್ಥಿರ ಶೀರ್ಷಿಕೆಗಳು.**

**ನಿಮ್ಮ ಪ್ರತಿಯನ್ನು ಕಾಯ್ದಿರಿಸಿ.** ಬೆಲೆ: ರೂ. 1–00 ಮಾತ್ರ

ವಿಶೇಷ ಸೂಚನೆ: ಹೊಸದಾಗಿ ಚಂದಾದಾರರಾಗಬಯಸುವವರು ಕನಿಷ್ಠ ಒಂದು ವರ್ಷದ ಚಂದಾ ಹಣವನ್ನು ಕಳುಹಿಸಬೇಕು. ಅದಕ್ಕಿಂತಲೂ ಕಡಿಮೆ ಮೊತ್ತವನ್ನು ಸ್ವೀಕರಿಸಲಾಗುವುದಿಲ್ಲ. ವಾರ್ಷಿಕ ಚಂದಾ ರೂ. 12–00 ಮಾತ್ರ. ಹಿಂದಿನ ಚಂದಾದಾರರು ತಮ್ಮ ಚಂದಾ ಕ್ರಮಸಂಖ್ಯೆಯನ್ನು ತಪ್ಪದೆ ಪ್ರತಿ ಕಾಗದಲ್ಲೂ ಬರೆಯಬೇಕು. ಬರೆಯಿರಿ – ವೆಲ್‌ಫೇರ್ ಆಫೀಸರ್ ಸೇಲ್ಸ್‌ವಿಂಗ್, ತಿ.ತಿ.ದೇ. ತಿರುಪತಿ.

# ತಿಂಗಳಿನ ಮುಖ್ಯದಿನಗಳು

## ಮೇ 1985

| | | |
|---|---|---|
| 3 | ಶುಕ್ರವಾರ | ಶ್ರೀ ನರಸಿಂಹ ಜಯಂತಿ |
| 4 | ಶನಿವಾರ | ಸಂಪೂರ್ಣ ಚಂದ್ರಗ್ರಹಣ |
| 7 | ಮಂಗಳವಾರ | ತಿರುಪತಿಯಲ್ಲಿ ಗಂಗಜಾತ್ರೆ ಆರಂಭ |
| 10 | ಶುಕ್ರವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವದ ರಥೋತ್ಸವ |
| 11 | ಶನಿವಾರ | ನಾಗಲಾಪುರಂ ಶ್ರೀ ವೇದನಾರಾಯಣಸ್ವಾಮಿ ಬ್ರಹ್ಮೋತ್ಸವದ ಅವಭೃತ |
| 14 | ಮಂಗಳವಾರ | ಶ್ರೀ ಹನುಮಜ್ಜಯಂತಿ, ಗಂಗಜಾತ್ರೆ ಸಮಾಪ್ತಿ |
| 25 | ಶನಿವಾರ | ತಿರುಪತಿ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ |
| 29 | ಬುಧವಾರ | ಶ್ರೀ ಗೋವಿಂದರಾಜಸ್ವಾಮಿ ಗರುಡೋತ್ಸವ<br>ತಿರುಚಾನೂರು ಶ್ರೀ ಪದ್ಮಾವತೀದೇವಿ ತೆಪ್ಪೋತ್ಸವಾರಂಭ |
| 30 | ಗುರುವಾರ | ನಾರಾಯಣವನಂ ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ ಧ್ವಜಾರೋಹಣ. |

# ಗಮನಿಕೆ

ವಿವಿಧಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ. ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ.

* ಸಪ್ತಗಿರಿಯನ್ನು ಕೋರುವವರು ಪ್ರತಿ ತಿಂಗಳಿನಲ್ಲಿ 15 ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು. ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ.

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸಚಂದಾ' ಎಂದು ಬರೆಯಬೇಕು. ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು. ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ.

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು.

**ವೆಲ್‌ಫೇರ್ ಆಫೀಸರ್**
ಪಬ್ಲಿಕೇಷನ್ ಸೆಕ್ಷನ್
ಟಿ. ಟಿ. ಡಿ.
ತಿರುಪತಿ–517501

Edited and Published on behalf of the T. T. Devasthanams by K. Subba Rao, M.A., and Printed at T. T. D. Press by M. Vijayakumar Reddy, Manager, T. T. D. Press, Tirupati – 517501.

